# ಡಾ. ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯದ ವಿಭಿನ್ನ ನೆಲೆಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ನಿಬಂಧ)

ಸಂಶೋಧಕರು

ಗುರುರಾಜ್ ಹೆಚ್.

ಮಾರ್ಗದರ್ಶಕರು

ಡಾ. ಸುಚೇತಾ ನವರತ್ನ

ಸಹಾಯಕ ಪ್ರಾಧ್ಯಾಪಕರು





ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ--೫೮೩ ೨೭೬

೨೦೧೧-೧೨

# ಡಾ. ಬಿ,ಜಿ,ಎಲ್, ಸ್ವಾಮಿಯವರ ಸಾಹಿತ್ಯದ ವಿಭಿನ್ನ ನೆಲೆಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ನಿಬಂಧ)

ಸಂಶೋಧಕರು

**ಗುರುರಾಜ್. ಹೆಚ್**

ಮಾರ್ಗದರ್ಶಕರು

**ಡಾ. ಸುಚೇತಾ ನವರತ್ನ**

ಸಹಾಯಕ ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೧-೧೨

# ಪ್ರಮಾಣ ಪತ್ರ

**"ಡಾ. ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯದ ವಿಭಿನ್ನ ನೆಲೆಗಳು"** ಎಂಬ ನಿಬಂಧವನ್ನು ಡಾ. ಸುಚೇತಾ ನವರತ್ನ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 30.6.2012

**ಗುರುರಾಜ ಹೆಚ್.**
ಸಂಶೋಧಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

**"ಡಾ. ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯದ ವಿಭಿನ್ನ ನೆಲೆಗಳು"** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ಗುರುರಾಜ ಹೆಚ್**. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 30/6/2012

**ಡಾ. ಸುಚೇತಾ ನವರತ್ನ**
ಸಹಾಯಕ ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಪರಿವಿಡಿ


| | | |
|---|---|---|
| ಅಧ್ಯಾಯ ಒಂದು – | ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ | ೧–೫ |
| ಅಧ್ಯಾಯ ಎರಡು – | ಬಿ.ಜಿ.ಎಲ್. ಸ್ವಾಮಿಯವರ ಜೀವನ ಸಾಹಿತ್ಯ – ಸ್ಥೂಲನೋಟ | ೬–೨೪ |
| ಅಧ್ಯಾಯ ಮೂರು – | ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ ಸೃಜನೆ | ೨೫–೩೯ |
| ಅಧ್ಯಾಯ ನಾಲ್ಕು – | ಭಾಷಾಂತರ ಸಾಹಿತ್ಯ | ೪೦–೫೫ |
| ಅಧ್ಯಾಯ ಐದು – | ದ್ರಾವಿಡ ಸಂಬಂಧಿ ಚಿಂತನೆಗಳು | ೫೬–೭೨ |
| ಅಧ್ಯಾಯ ಆರು – | ವಿಜ್ಞಾನ ಸಾಹಿತ್ಯ | ೭೩–೮೪ |
| ಅಧ್ಯಾಯ ಏಳು– | ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯಿಕ ಭಾಷೆಶೈಲಿ, ವಸ್ತು, ಸ್ವರೂಪ ಮತ್ತು ತಾತ್ವಿಕತೆ | ೮೫–೧೦೪ |
| ಅಧ್ಯಾಯ ಎಂಟು – | ಸಮಾರೋಪ | ೧೦೫–೧೦೮ |
| | ಅನುಬಂಧ | ೧೦೯–೧೧೧ |
| | ೧. ಗ್ರಂಥಋಣ | |

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

**ಪ್ರಸ್ತಾವನೆ:**

ಆಧುನಿಕ ಕನ್ನಡ ಸಾಹಿತ್ಯದ ಸೃಜನಶೀಲ ಬರಹಗಾರರಲ್ಲಿ ಡಾ. ಬೆಂಗಳೂರು ಗುಂಡಪ್ಪ ಲಕ್ಷ್ಮಿನಾರಾಯಣ ಸ್ವಾಮಿ (ಬಿ.ಜಿ.ಎಲ್.ಸ್ವಾಮಿ) ಕೂಡ ಒಬ್ಬರು. ಮೂಲತಃ ವೃತ್ತಿಯಿಂದ ಸಸ್ಯಶಾಸ್ತ್ರಜ್ಞರಾದರೂ ಕನ್ನಡ ಸಾಹಿತ್ಯಕ್ಕೆ ಇವರ ಕೊಡುಗೆ ಅಮೂಲ್ಯವಾದದ್ದು. ಭಾಷೆ, ಸಾಹಿತ್ಯ, ಸಂಸ್ಕೃತಿಯ ಚಿಂತಕರಾದ ಬಿ.ಜಿ.ಎಲ್.ಸ್ವಾಮಿಯವರು ಕನ್ನಡ, ತಮಿಳು, ಸಂಸ್ಕೃತ, ಇಂಗ್ಲೀಷ್ ಭಾಷೆಗಳಲ್ಲಿ ಪರಿಣಿತರಾಗಿದ್ದರು.

ಕನ್ನಡ ಲೇಖಕರಲ್ಲಿ ಸ್ವಾಮಿಯವರ ವಿಶಿಷ್ಟವಾದ, ಅನನ್ಯವಾದ ವ್ಯಕ್ತಿತ್ವ ನೇರ ನುಡಿಯ ಮಾತುಗಾರರಷ್ಟೇ ಅಲ್ಲದೇ ವಿಷಯದ ವಸ್ತುನಿಷ್ಠ ನಿರೂಪಕರಾಗಿ ಬಿ.ಜಿ.ಎಲ್. ಸ್ವಾಮಿಯವರನ್ನು ಕಾಣಬಹುದು. ಬಿ.ಜಿ.ಎಲ್.ಸ್ವಾಮಿಯವರ ಸಾಹಿತ್ಯವು ವಿಭಿನ್ನ ನೆಲೆಗಳಿಂದ ಕೂಡಿದ್ದು ದ್ರಾವಿಡ ಚಿಂತನೆಯ ನೆಲೆಯಲ್ಲಿ ಭಾಷಿಕ, ಸಾಂಸ್ಕೃತಿಕ, ಧಾರ್ಮಿಕ, ವೈಚಾರಿಕ ಚಿಂತನೆಯನ್ನು ಕಾಣಬಹುದು. ಭಾಷಾಂತರದ ನೆಲೆಯಲ್ಲಿ ತಮಿಳಿನಿಂದ ಕನ್ನಡಕ್ಕೆ ಅವರು ಭಾಷಾಂತರಿಸಿದ ೪ ಕೃತಿಗಳು ಕನ್ನಡ ಸಂದರ್ಭಕ್ಕೆ ತಕ್ಕಂತೆ ಭಾಷಾಂತರಿಸಿದ್ದು ವಿಶಿಷ್ಟವಾಗಿದೆ.

ಕೀರ್ತನಾಥ್ ಕುರ್ತುಕೋಟಿಯವರು 'ಕಾಲೇಜುರಂಗ' ಕೃತಿಗೆ ಮುನ್ನುಡಿ ಬರೆಯುತ್ತಾ "ಬಿ.ಜಿ.ಎಲ್.ಸ್ವಾಮಿಯವರ ಎಲ್ಲಾ ಬರಹವನ್ನು ಹಾಸ್ಯ ಎಂದು ವರ್ಗೀಕರಿಸಿದರೆ ಅದುವೇ ಹಾಸ್ಯವಾಗುತ್ತದೆ. ಸತ್ಯವನ್ನು ಹೇಳಬೇಕಾದರೆ ಹಾಸ್ಯವನ್ನು ಆಶ್ರಯಿಸಬೇಕು ಎಂದು ಹೇಳುವ

ಅವರ ಮಾತು ನಿಜ." ಓದುಗನ ಮನಸೂರೆಗೊಳ್ಳುವಂತೆ ಹಾಸ್ಯರಸದ ಮೂಲಕ ಇವರ ಕೃತಿಗಳು ವಿಶಿಷ್ಟವಾಗಿವೆ. ಇದು ಅವರ ಪಾಂಡಿತ್ಯದಿಂದ ಹಾಸ್ಯಪ್ರಜ್ಞೆಗೆ ಎಲ್ಲಿಲ್ಲದ ಶ್ರೀಮಂತಿಕೆಯನ್ನು ಒದಗಿಸಿದೆ.

ಈ ಹಿನ್ನೆಲೆಯಲ್ಲಿ ಬಿ.ಜಿ.ಎಲ್. ಸ್ವಾಮಿಯವರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿದ ಕೊಡುಗೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಲಾಗಿದೆ. ಅವರ ಒಟ್ಟು ಬರಹ ಸೃಜನಶೀಲತೆ ನೆಲೆಗಳಿಂದ ಕೂಡಿದ್ದು; ಬಹುಶಿಸ್ತೀಯ ವಿಧಾನವಾಗಿದೆ. ಅವರ ಬರಹವನ್ನು ಅದರ ವಿಭಿನ್ನ ಪರಿಪ್ರೇಕ್ಷ್ಯಗಳ ಹಿನ್ನೆಲೆಯಲ್ಲಿ ಪರಿಭಾವಿಸಿಕೊಳ್ಳುತ್ತಲೇ ಅದರೊಳಗಿನ ಬಹುತ್ವವನ್ನು ಪ್ರತಿಪಾದಿಸುವುದು, ಹಾಗೂ ಯಾವುದೇ ಶಿಸ್ತನ್ನು ಸಾಹಿತ್ಯಕ್ಕೆ ಒಗ್ಗಿಸಿಕೊಳ್ಳಬಹುದೆಂದು ಹೊಸ ಧೋರಣೆ ಆದರ್ಶ ಪರಿಕಲ್ಪನೆ ಎದ್ದು ಕಾಣುವ ಅಂಶವೆನಿಸಿದೆ. ಇಂತಹ ಇನ್ನೂ ಅನೇಕ ಅಂಶಗಳನ್ನು ಅಧ್ಯಯನದ ಮೂಲಕ ಹೆಕ್ಕಿ ತೆಗೆಯುವ ಸಾಧ್ಯತೆಯಿದೆ.

**ಅಧ್ಯಯನದ ಉದ್ದೇಶ:**

ಕನ್ನಡ ಸಾಹಿತ್ಯದಲ್ಲಿ ಇವರ ಬಗ್ಗೆ ಅಧ್ಯಯನ ವಿರಳ. ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧವು (ಆಧುನಿಕ ಕನ್ನಡ ಗದ್ಯ ಮತ್ತು ಬಿ.ಜಿ.ಎಲ್.ಸ್ವಾಮಿಯವರ ಸಾಹಿತ್ಯ) ಬದುಕು-ಬರಹ ಒಳಗೊಂಡಿದೆ. ಭಾಷಿಕ ಸಂಸ್ಕೃತಿ ನೆಲೆಯಿಂದ ತಲಸ್ಪರ್ಶಿ ಅಧ್ಯಯನವನ್ನು ನಿರೂಪಿಸುವ ಸಾಧ್ಯತೆ, ಹಾಸ್ಯದ ಮೂಲಕವೇ ಅತ್ಯಂತ ಗಹನ ವಿಚಾರಗಳನ್ನು ವಸ್ತುನಿಷ್ಠವಾಗಿ ಮಂಡಿಸುವ ಕ್ರಮ ಹಾಗೂ ದ್ರಾವಿಡ ಚಿಂತನೆಯ ಚರ್ಚೆ ವೈಜ್ಞಾನಿಕ ಸ್ಪರ್ಶ ನೀಡುವ ಇವರ ಸಾಹಿತ್ಯ ಹೀಗೆ ಹತ್ತು ಹಲವು ಆಯಾಮಗಳಿವೆ.

ಬಿ.ಜಿ.ಎಲ್. ಸ್ವಾಮಿಯವರದ್ದು ಬಹುಮುಖಿ ವ್ಯಕ್ತಿತ್ವ, ವಿಜ್ಞಾನ, ಭಾಷಿಕ, ದ್ರಾವಿಡ, ಭಾಷಾಂತರ ಹೀಗೆ ಹತ್ತು ಹಲವು ಶಿಸ್ತುಗಳನ್ನು ಪ್ರಕಾರಗಳನ್ನು, ಪರಿಕಲ್ಪನೆಗಳನ್ನು ಸರಳ ಶೈಲಿಯಲ್ಲಿ ಮಂಡಿಸುವ ಅತ್ಯಂತ ಪ್ರಭಾವಶಾಲಿ ವ್ಯಕ್ತಿತ್ವ ಇವರದು. ಇಂತಹ ವೈಚಾರಿಕ ವ್ಯಕ್ತಿಯೋರ್ವರ ಕುರಿತು ಕನ್ನಡ ಸಾಹಿತ್ಯದಲ್ಲಿ ಬೆರಳೆಣಿಕೆಯ ಕೃತಿಗಳಿವೆ. ನಡೆದಿರುವ ಅಧ್ಯಯನಗಳು ಅದರದೇ ಮಿತಿಯಲ್ಲಿವೆ. ಈ ರೀತಿಯಲ್ಲಿ ಸೀಮಿತ ಆಕರಗಳಲ್ಲಿ ಮಂಡಿತವಾದ ವಿಚಾರಗಳನ್ನು ತಲಸ್ಪರ್ಶಿ ಅಧ್ಯಯನ ಮಾಡುವುದು ಉದ್ದೇಶವಾಗಿದೆ.

ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ ಸೃಜನೆಯಲ್ಲಿ ಮಹತ್ವವಾಗಿದೆ. ಭಾಷಾಂತರ ತಮಿಳು-ಕನ್ನಡ ಭಾಷೆಗಳ ಬಾಂಧವ್ಯ ಬೆಸೆಗೊಳಿಸಿದ ಬಗೆ ಹಾಗೂ ಭಾಷಾಂತರ ಕೃತಿಗಳ ಭಾಷಿಕ, ಸಂಸ್ಕೃತಿ, ಸಾಹಿತ್ಯಿಕವಾಗಿ ಅಧ್ಯಯನ್ನ ಮಾಡುವುದು.

* ದ್ರಾವಿಡ ಸಂಬಂಧಿ, ಚಿಂತನೆಗಳನ್ನು ಭಾಷಿಕ, ಸಾಹಿತ್ಯಿಕ ಹಾಗೂ ಧಾರ್ಮಿಕ, ಐತಿಹಾಸಿಕ, ನೆಲೆಗಟ್ಟಿನಲ್ಲಿ ಸ್ವಾಮಿಯವರು ಚರ್ಚಿಸಿದ ಬಗೆಯನ್ನು ಅಧ್ಯಯನಕ್ಕೆ ಒಳಪಡಿಸುವುದು ಅವಶ್ಯಕವಾಗಿದೆ.

* ಬಿ.ಜಿ.ಎಲ್. ಸ್ವಾಮಿಯವರು ವಿಜ್ಞಾನವನ್ನು ಸಾಹಿತ್ಯ ರೂಪವಾಗಿ ಬರೆದ ಬಗ್ಗೆ ಹಾಗೂ ಅವರು ಸಾಹಿತ್ಯದಲ್ಲಿ ವಿಜ್ಞಾನ ಅಂಶಗಳನ್ನು ಮೇಳೈಸಿದ ಬಗೆಯನ್ನು ಪ್ರಯತ್ನ ಮಾಡಬೇಕಾಗಿದೆ.

* ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯದ ಭಾಷಾಶೈಲಿ ವಸ್ತು ಹಾಗೂ ಸ್ವರೂಪವನ್ನು ಕಂಡುಕೊಳ್ಳುವುದು ಅವಶ್ಯಕವಾಗಿದೆ. ಅವರ ಸಾಹಿತ್ಯಿಕ ಮತ್ತು ಸಂಕೀರ್ಣ ಕೃತಿಗಳು ಭಾಷಾಶೈಲಿ, ಕೃತಿಗಳ ವಸ್ತು ಮತ್ತು ಕೃತಿಯ ಸ್ವರೂಪ ನಿರ್ವಹಣೆ ಅನುಸರಿಸಿದ ತಂತ್ರಗಳು ಗಮನಾರ್ಹವೆನಿಸಿವೆ.

**ಅಧ್ಯಯನದ ವ್ಯಾಪ್ತಿ:**

ಪ್ರಸ್ತುತ ಅಧ್ಯಯನದಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಕನ್ನಡ ಬರಹಗಳನ್ನು ಮಾತ್ರ ಚರ್ಚಿಸಲಾಗಿದೆ. ಇದು ಅಧ್ಯಯನದ ಮಿತಿಯೂ ಹೌದು, ವ್ಯಾಪ್ತಿಯೂ ಹೌದು. ಡಾ.ಬಿ.ಜಿ.ಎಲ್. ಸ್ವಾಮಿಯವರು ಬರೆದ ಕೃತಿಗಳಾದ ಹಸಿರುಹೊನ್ನು, ತಮಿಳು ತಲೆಗಳ ನಡುವೆ, ಸಾಕ್ಷಾತ್ಕಾರ ದಾರಿ, ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ, ಫಲಶ್ರುತಿ, ಕಾಲೇಜುರಂಗ, ಕಾಲೇಜು ತರಂಗ, ಪ್ರಾಧ್ಯಾಪಕನ ಪೀಠದಲ್ಲಿ, ದೌರ್ಗಂಧಿಕಾ ಪಹರಣ, ಬೃಹದಾರಣ್ಯಕ, ಮೈಸೂರು ಡೈರಿ, ಅಮೇರಿಕಾದಲ್ಲಿ ನಾನು, ಶಾಸನಗಳಲ್ಲಿ ಗಿಡಮರಗಳು, ಭಾಷಾಂತರ ಕೃತಿಗಳಾದ ನಡೆದಿಯೆ ಬಾಳೌ ಕಾವೇರಿ, ಜ್ಞಾನರಥ, ಬೆಳದಿಂಗಳಲ್ಲಿ ಅರಳಿದ ಮೊಲ್ಲೆ ಕೃತಿಗಳನ್ನು ಸ್ವಾಮಿಯವರ ಕುರಿತು ಬಂದಂತಹ ಲೇಖನಗಳು ವಿಮರ್ಶೆಗಳನ್ನು ಅಧ್ಯಯನದ ವ್ಯಾಪ್ತಿಗೆ ಬಳಸಿಕೊಳ್ಳಲಾಗಿದೆ. ಕನ್ನಡ ಬರಹಗಳನ್ನು ವ್ಯಾಪ್ತಿಯಾಗಿರಿಸಿ ಅಧ್ಯಯನ ಕೈಗೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ:**

ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಎರಡು ಪ್ರಮುಖ ಸ್ವರೂಪಗಳಲ್ಲಿ ಚರ್ಚಿಸಲಾಗಿದೆ.

೧. ಸಾಹಿತ್ಯ ಸೃಜನೆಯ ಭಾಗವಾಗಿ ಸಾಹಿತ್ಯದ ಹಲವು ಪ್ರಕಾರಗಳನ್ನು ವಿಷಯ ಮಂಡನೆಗಾಗಿ ಬಳಸಿಕೊಂಡ ಬಗೆ ಅಂದರೆ ಗಹನವಾದ ವಿಚಾರಗಳನ್ನು, ಶಾಸ್ತ್ರೀಯ ನಿಲುವುಗಳನ್ನು ಸಾಹಿತ್ಯಿಕ ನೆಲೆಯಲ್ಲಿ ಪ್ರತಿಪಾದಿಸಿದ ಬಗೆ.

೨. ಸಾಹಿತ್ಯದ ಅದರಲ್ಲೂ ಸಂಪೂರ್ಣವಾಗಿ ಸಾಹಿತ್ಯಿಕ ಪಠ್ಯಗಳು ಒಳಗೊಳ್ಳುವ ವೈಜ್ಞಾನಿಕ ಅಂಶಗಳು ಹಾಗೂ ಇತರ ಅನ್ಯಜ್ಞಾನ ಶಿಸ್ತುಗಳನ್ನು ಸಂಕೀರ್ಣ ಸಾಹಿತ್ಯವಾಗಿಸಿ ಬಿ.ಜಿ.ಎಲ್. ಸ್ವಾಮಿಯವರು ಇದನ್ನು ಅನುಸಂಧಾನಗೊಳಿಸಿದ ಬಗೆ.

ಈ ಸ್ವರೂಪವು ಮುಂದಿನ ಚರ್ಚೆಗಳಲ್ಲಿ ಅದರದೇ ಆದ ವೈಯಕ್ತಿಕ ನೆಲೆಯಲ್ಲಿ ಘಟಕದ ಪ್ರಾಧಾನ್ಯಕ್ಕನುಗುಣವಾಗಿ ಈ ಚರ್ಚೆ ಮುಂದುವರೆಯುತ್ತದೆ. ಅದಕ್ಕಾನುಸಾರವಾಗಿ ಅಧ್ಯಾಯಗಳ ವಿನ್ಯಾಸ ಈ ರೀತಿಯಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪದ ಕುರಿತು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಬರಹದ ಮೂಲಕ ಜೀವನ ಸಾಹಿತ್ಯದ ಸ್ಥೂಲನೋಟವಾಗಿ ಅವರ ವ್ಯಕ್ತಿಚಿತ್ರ ಕಟ್ಟಿಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ ಸೃಜನೆ ಅವರ ಕೃತಿಗಳಲ್ಲಿ ಮೂಡಿಬಂದ ಬಗೆ ಕಂಡುಕೊಳ್ಳಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅವರು ಭಾಷಾಂತರಿಸಿರುವ ಕನ್ನಡ ಕೃತಿಗಳ ಸಾಹಿತ್ಯಿಕ, ಭಾಷಿಕ, ಸಾಂಸ್ಕೃತಿಕ ನೆಲೆಯನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ ಐದರಲ್ಲಿ ತಮಿಳು ತಲೆಗಳ ನಡುವೆ ಕೃತಿಯಲ್ಲಿ ಬಿ.ಜಿ.ಎಲ್. ಸ್ವಾಮಿಯವರು ತಮಿಳು ಭಾಷೆ, ಸಾಹಿತ್ಯ ಕೇಂದ್ರೀಕರಿಸಿ ಚರ್ಚಿಸಲಾಗುವ ದ್ರಾವಿಡ ಚಿಂತನೆಗಳನ್ನು ಗುರುತಿಸಲಾಗುವುದು.

ಅಧ್ಯಾಯ ಆರರಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಕೃತಿಗಳಲ್ಲಿನ ವೈಜ್ಞಾನಿಕ ಅಂಶಗಳನ್ನು ಗುರುತಿಸಿ ಅವರ ವಿಜ್ಞಾನ ಸಾಹಿತ್ಯದ ವಿಸ್ತೃತ ಚರ್ಚೆ ಮಾಡಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯಿಕ ಭಾಷೆ, ವಸ್ತು, ಸ್ವರೂಪವು ಅವರ ಕೃತಿಯಲ್ಲಿ ಮೂಡಿಬಂದ ಬಗೆಯನ್ನು ಕಂಡುಕೊಳ್ಳಲಾಗುವುದು.

ಎಂಟನೆಯ ಅಧ್ಯಾಯದಲ್ಲಿ ಅಧ್ಯಯನ ಒಟ್ಟು ಸಾರಾಂಶವನ್ನು ವಿವರಿಸಲಾಗುವುದು.

## ಅಧ್ಯಾಯ ೨

## ಡಾ. ಬಿ.ಜಿ.ಎಲ್.ಸ್ವಾಮಿಯವರ ಜೀವನ ಮತ್ತು ಸಾಹಿತ್ಯ - ಸ್ಥೂಲನೋಟ

ಆಧುನಿಕ ಕನ್ನಡ ಸಾಹಿತ್ಯದ ಸೃಜನಶೀಲ ಬರಹಗಾರರಲ್ಲಿ ಡಾ. ಬಿ.ಜಿ.ಎಲ್. ಸ್ವಾಮಿಯವರು ಒಬ್ಬರು. ಸ್ವಾಮಿಯವರ ಬಹುಪಾಲು ಕೃತಿಗಳು ಅವರ ಸ್ವ ಅನುಭವದ ಪ್ರತಿಬಿಂಬವಾಗಿದೆ. ಅವರ ಬಹುಮುಖಿ ವ್ಯಕ್ತಿತ್ವದ ಭಿನ್ನ ಹರವುಗಳನ್ನು ಸ್ವಾಮಿಯವರ ಅನುಭವದ ಕಥನಗಳು ಸುಪ್ತವಾದ ಸುರುಳಿಯನ್ನು ಬಿಚ್ಚಿ ಇಡುತ್ತವೆ. ಅವರ ಪಾಂಡಿತ್ಯ ಪೂರ್ಣ ಸಾಹಿತ್ಯ ರಚನೆಯು ಅವರ ವ್ಯಕ್ತಿತ್ವದ ಸ್ಥೂಲ ಪ್ರತೀಕವಾಗಿದೆ. ಸ್ವಾಮಿಯವರ ಸಮಗ್ರ ಕೃತಿಗಳನ್ನು ಬಳಸಿಕೊಂಡು ಮತ್ತು ಸ್ವಾಮಿಯವರ ಬರಹಗಳು ಮತ್ತು ವ್ಯಕ್ತಿತ್ವ ಕುರಿತು ಬಂದಂತಹ ಕೃತಿಗಳನ್ನು ಬಳಸಿಕೊಂಡು ಸ್ವಾಮಿಯವರ ವ್ಯಕ್ತಿಚಿತ್ರವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಡಾ. ಸ್ವಾಮಿಯವರದು ವಿಶಿಷ್ಟ ವ್ಯಕ್ತಿತ್ವ. ಅವರನ್ನು ಯಾವ ಕ್ಷೇತ್ರಕ್ಕೆ ಸೀಮಿತಗೊಳಿಸಬೇಕೆಂದು ಪ್ರಶ್ನೆಯಾಗಿಯೇ ಉಳಿಯುವ ಧೀಮಂತ ವ್ಯಕ್ತಿತ್ವ ಅವರದು. ಆದರೆ ಸಾಹಿತ್ಯ ವಲಯದಲ್ಲಿ ಚರ್ಚಿತವಾಗಿರುವುದು ಬೆರಳಣಿಕೆಯಷ್ಟು. ಇಂತಹ ಅಲ್ಪ ಆಕರಗಳು ಮತ್ತು ಅವರು ರಚಿಸಿದ ಕೃತಿಗಳ ಮೂಲಕ ಅವರ ವ್ಯಕ್ತಿತ್ವವನ್ನು ನಿರೂಪಿಸುವ ಬಗೆ ಇಲ್ಲಿದೆ. ಎಂದಿನ ಸಿದ್ಧಮಾದರಿ ಬದುಕು ಬರಹಗಳ ಚರ್ಚೆಯನ್ನು ಬಳಸದೇ ಬರಹ ಮತ್ತು ಇತರರ ವಿಮರ್ಶೆಯ ಮೂಲಕ ಬಿ.ಜಿ.ಎಲ್. ಅವರ ವ್ಯಕ್ತಿತ್ವವನ್ನು ನಿರೂಪಿಸುವ ಬಗೆಯಾಗಿ ಇದು ಗೋಚರಿಸುತ್ತದೆ. ಯಾವುದೇ ಒಬ್ಬ ವ್ಯಕ್ತಿಯ ವಿಶಿಷ್ಟ ಗುಣಗಳಿಂದಾಗಿ ವ್ಯಕ್ತಿಯ ಪರಿಚಯವನ್ನು ಮಾಡಿಕೊಡುವ ಬಗೆಯಂತೆ ಇದೊಂದು ವ್ಯಕ್ತಿಚಿತ್ರವಾಗಿದೆ. ಬಾಲ್ಯ, ಯೌವ್ವನಗಳನ್ನೊಳಗೊಂಡ ಜೀವನ ಚರಿತ್ರೆಯಾಗಿಲ್ಲ

ಬದಲಾಗಿ ಅವರ ಬಹುಮುಖಿ ಹಾಗೂ ಅಂತರಶಿಸ್ತೀಯ ನಿಲುವಿನ ಮೂಲಕ ಅವರ ವ್ಯಕ್ತಿತ್ವ ಪರಿಚಯಿಸಲಾಗಿದೆ.

ಸ್ವಾಮಿಯವರನ್ನು ಹತ್ತಿರದಿಂದ ಕಂಡಂತೆ ಅವರ ಒಡನಾಡಿಗಳು. ಬಂಧುಗಳ ಅಭಿಪ್ರಾಯಗಳು. ಅವರು ಸಾಹಿತ್ಯಿಕವಾಗಿ ನೈತಿಕ ಜೀವನದಲ್ಲಿ ನಡೆದ ದಾರಿಯನ್ನು ಹೇಳುವ ಬಗೆ ಸ್ವಾಮಿಯವರ ವ್ಯಕ್ತಿತ್ವದ ಪರಿಚಯ ಮಾಡಿಕೊಡುತ್ತದೆ.

ಸ್ವಾಮಿಯವರ ಜೀವನದ ಹಲವು ಘಟನೆಗಳ ಕುರಿತು ತಮ್ಮ ಅನುಭವದ ಕಥನಗಳಲ್ಲಿ ಸ್ವಾಮಿಯವರು ದಾಖಲಿಸಿದ್ದ ಅವರ ಜೀವನದ ಪ್ರಮುಖ ಸಂದರ್ಭಗಳು. ವೃತ್ತಿ ಬದುಕಿನ ಅನುಭವಗಳು, ಶೈಕ್ಷಣಿಕ ಸಂದರ್ಭದ ಪ್ರವಾಸಗಳಲ್ಲಿ ಅವರು ತಮ್ಮ ಒಡನಾಡಿಗಳು ಮತ್ತು ಸಹದ್ಯೋಗಿಗಳು ವಿದ್ಯಾರ್ಥಿಗಳೊಂದಿಗೆ ಸಂಬಂಧಿಕರೊಂದಿಗೆ ನಡೆಸಿದ ಸಂಭಾಷಣೆಗಳ ಮೂಲಕ ಸ್ವಾಮಿಯವರ ವ್ಯಕ್ತಿಚಿತ್ರವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ವ್ಯಕ್ತಿ ಚಿತ್ರವನ್ನು ಬಿ.ಜಿ.ಎಲ್. ಅವರ ಜೀವನದ ದೈನಂದಿನ ಅಂಶಗಳು ಹಾಗೂ ಸಾಹಿತ್ಯಿಕ ನೆಲೆಯ ಹಿನ್ನೆಲೆಗಳಲ್ಲಿ ವಿವರಿಸಲಾಗಿದೆ. ಮೊದಲ ಘಟ್ಟದಲ್ಲಿ ಜೀವನದ ಮೂಲಕ ಸಾಹಿತ್ಯದ ಸೃಜನೆಯಾದರೆ ಎರಡನೆಯ ಘಟ್ಟದಲ್ಲಿ ಸಾಹಿತ್ಯದ ಮೂಲಕ ಜೀವನಾನುಭವ ರೂಪುಗೊಳ್ಳುತ್ತದೆ. ಸಾಹಿತ್ಯ ರೂಪುಗೊಳ್ಳಲು ಬದುಕಿನ ಹಲವಾರು ಅಂಶಗಳು ಕಾರಣವಾಗುವುದನ್ನು ಮೊದಲ ಹಂತ ಚರ್ಚಿಸಿದರೆ ೨ನೇ ಹಂತದಲ್ಲಿ ಸಾಹಿತ್ಯದ ಮೂಲಕ ಅವರ ವೃತ್ತಿ-ಪ್ರವೃತ್ತಿಗಳ ಪರಿಚಯ ಮಾಡಿಕೊಡಲಾಗಿದೆ.

**ಬದುಕಿನ ಕ್ರಮ**

**ನೇರ ಸ್ವಭಾವ:**

ಬಿ.ಜಿ.ಎಲ್. ಸ್ವಾಮಿಯವರು ನೇರವಾದ ನಿಷ್ಠುರ ನಡಾವಳಿಯುಳ್ಳವರಾಗಿದ್ದರು. ಸ್ವಭಾವತಃ ಇವರು ಯಾರಿಗೆಯಾಗಲ್ಲಿ ತಮಗೆ ಸರಿ ಎನಿಸಿದ ವಿಚಾರವನ್ನು ಯಾವುದೇ ಅಳಕು ಇಲ್ಲದೇ ಹೇಳಿ ಬಿಡುತ್ತಿದ್ದರು. ಇವರ ವೃತ್ತಿ ಜೀವನದ ಹಲವಾರು ಘಟನೆಗಳು ಇದಕ್ಕೆ ಪುಷ್ಠಿ ನೀಡುತ್ತವೆ. ಇವರ ಮಾತಿನ ಶೈಲಿಯು ಹಾಸ್ಯಭರಿತ ವ್ಯಂಗ್ಯದಿಂದ ಕೂಡಿದ್ದಾಗಿತ್ತು. ತಮಗೆ ಆಪ್ತರಾಗಲಿ, ಹಿರಿಯರು, ಕಿರಿಯರು, ಯಾರೇ ಇರಲಿ ವಾಸ್ತವಿಕವಾಗಿ ಮಾತನಾಡುವ ಸ್ವಭಾವದವರಾಗಿದ್ದರು. ಇವರ ಹಲವು ಕೃತಿಗಳಲ್ಲಿ ಸ್ವತಃ ದಾಖಲಿಸಿದನ್ನು ಬಳಸಿಕೊಂಡು, ಅವರ ಸ್ವಭಾವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಮಹಾರಾಜ ಕಾಲೇಜಿಗೆ

ಸ್ವಾಮಿಯವರು ಒಮ್ಮೆ ಭೇಟಿ ನೀಡಿದಾಗ ಅಧ್ಯಾಪಕರು ಅವರನ್ನು ಅಸಡ್ಡೆಯಿಂದ ಕಂಡು ಮತ್ತೆ ಮಾತನಾಡಿಸಿದಾಗ ನಡೆದ ಸಂಭಾಷಣೆ ಅವರ ಛಾಟಿ ಮಾತಿಗೆ ಸಾಕ್ಷಿಯಾಗಿದೆ.

"ಕಾಲೇಜುರಂಗ ಸಿನಿಮಾ ನೋಡಿದ್ದೇವೆ. ಆದರೆ ಪುಸ್ತಕ ಓದಿಲ್ಲ.

ಅದಕ್ಕೇ ಕಾಸುಕೊಟ್ಟು ನೋಡಿದಿರಿ?"

"ಇಲ್ಲ ಸಾರ್ ಆ ಸಿನಿಮಾ ತಿಯಟರ್‌ನ ಪ್ರೊಪ್ರೈಟರ್ ಎರಡು ಪಾಸ್ ಕೊಟ್ಟಿದ್ದರು.' ಸರಿಯೇ ಸಿನಿಮಾದಲ್ಲಿರುವುದು ಪುಸ್ತಕದಲ್ಲಿಲ್ಲ. ಆದರೂ ಪುಸ್ತಕವನ್ನು ಯಾರಾದರೂ ಪುಕ್ಕಟೆಯಾಗಿ ಕೊಟ್ಟರು ಅದನ್ನು ಓದಿ ಟೈಮ್ ವೇಸ್ಟ್ ಮಾಡಿಕೊಳ್ಳಬೇಡಿ"[೧] ಎಂಬ ಈ ಸಂಭಾಷಣೆಯಲ್ಲಿ ಸ್ವಾಮಿಯವರೊಂದಿಗೆ ಒಬ್ಬ ಲೆಕ್ಚರರ್ ವ್ಯಂಗ್ಯವಾಗಿ ಮಾತನಾಡಿದಕ್ಕೆ ಸ್ವಾಮಿಯವರು ನೇರವಾಗಿ ತಮ್ಮ ಮಾತಿನ ಹರಿತವಾದ ಚಹರೆಯನ್ನು ನೀಡುತ್ತಾರೆ. ಇವರ ನೇರವಾದ ಮಾತು ಯಾವುದೇ ಉದ್ದೇಶವಿಲ್ಲದೆ ಸಂದರ್ಭಕ್ಕೆ ಅಂಗವಾಗಿ ಉತ್ತರ ನೀಡುತ್ತಿತ್ತು. ತಮಗೆ ಸರಿ ಎನಿಸಿದ ವಿಚಾರವನ್ನು ಹೇಳುವ ಸ್ವಭಾವ ಇವರದಾಗಿತ್ತು.

ಸ್ವಾಮಿಯವರಿಗೆ ಒಮ್ಮೆ ಕಾಲೇಜಿನಲ್ಲಿ ತಮ್ಮ ಡಿಪಾರ್ಟ್‌ಮೆಂಟ್ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿಸಬೇಕು ಎಂದು ಡೈರೆಕ್ಟರ್‌ರವರು ತಮ್ಮ ಕಾರ್ಯದರ್ಶಿಯನ್ನು ಸ್ವಾಮಿಯವರ ಬಳಿ ಕಳುಹಿಸುವ ಪ್ರಸಂಗದಲ್ಲಿ ಸ್ವಾಮಿಯವರ ವಿರುದ್ಧ ಸರ್ಕಾರಕ್ಕೆ, ಮಂತ್ರಿಗಳಿಗೆ ದೂರು ನೀಡುತ್ತೇನೆ ಎಂದು ಕಾರ್ಯದರ್ಶಿ ಹೇಳಿದಾಗ ಯಾವುದಕ್ಕೂ ಹೆದರುವುದಿಲ್ಲ ಎಂಬ ಅವರ ಬಿಚ್ಚು ಮಾತು ಅವರ ಮನೋಭಾವಕ್ಕೆ ಸಾಕ್ಷಿಯಾಗಿವೆ.

"ನೋಡಿ ನಿಮ್ಮ ಕಾಲೇಜಿನ ಎಲ್ಲಾ ಡಿಪಾರ್ಟ್‌ಮೆಂಟ್‌ಗಳಲ್ಲಿಯೋ ಈ ವರ್ಷ ೫ ಸೀಟುಗಳನ್ನು ಹೆಚ್ಚಿಸಬೇಕಾಗಿದೆ... ನೀವು ಮನಸ್ಸು ಮಾಡಬೇಕು.

ಇತರ ಡಿಪಾರ್ಟ್‌ಮೆಂಟ್‌ಗಳ ಸ್ಥಿತಿ ನನಗೇಕೆ ನನ್ನ ಡಿಪಾರ್ಟ್‌ಮೆಂಟ್‌ನಲ್ಲಿ ಸಾಧ್ಯವೇ ಇಲ್ಲ.

ಹೋಗಲ್ಲಿ... ನಾಲ್ಕು... ಮೂರು? 'ಬಿಲ್‌ಖುಲ್ ಸಾಧ್ಯವಿಲ್ಲ.'

ಎರಡು... ಒಂದು... ಒಂದೇ ಒಂದು? ಇನ್ನೊಂದು ಮೆಟ್ಟಲು ಇಳಿದು ಬಿಡಿ ಕೃತಜ್ಞತೆ ಸಲ್ಲಿಸುತ್ತೇನೆ. ಸುತ್ತು ಪ್ರದಕ್ಷಣೆ ಹಾಕುತ್ತೇನೆ.

ಹಾಗಿದ್ದರೆ ಮಂತ್ರಿಗೆ ತಿಳಿಸಿಬಿಡಲೆ? ಅಗತ್ಯವಿದ್ದರೆ ಆಗಬಹುದು."[೨]

ಈ ಮೇಲಿನ ಸಂಭಾಷಣೆಯಲ್ಲಿ ಸ್ವಾಮಿಯವರ ನೇರ ಮಾತುಗಾರಿಕೆಯ ಸ್ವಭಾವದ ಸ್ಪಷ್ಟತೆಯ ಗೋಚರವಾಗಿರುತ್ತದೆ. ಅವರು ಸ್ವಭಾವತ ತಮಗೆ ಸರಿ ಎನಿಸಿದ್ದು ಮಾಡುವವರಾಗಿದ್ದರು. ಯಾವ ಮಂತ್ರಿಗೂ ಹೆದರುತ್ತಿದ್ದಿಲ್ಲ. ತಮ್ಮ ವಿಭಾಗದ ಕ್ಷೇಮಕ್ಕಾಗಿ ಅವರ ಈ ನಿರ್ಧಾರವನ್ನು ಕಾರ್ಯದರ್ಶಿಗೆ ನಿಷ್ಠುರವಾಗಿ ಸಾಧ್ಯವೇ ಇಲ್ಲ ಎಂದು ಹೇಳುತ್ತಾರೆ. ಒಮ್ಮೆ ಅವರು ನಿರ್ಧಾರ ಕೈಗೊಂಡರೆ ಅವರು ಅದಕ್ಕೆ ಬದ್ಧರಾಗಿರುತ್ತಿದ್ದರು. ಅವರು ತಮ್ಮ ಅನಿಸಿಕೆಯನ್ನು ಯಾವುದೇ ಅಂಜಿಕೆ ಅಳಕು ಇಲ್ಲದೇ ನೇರವಾಗಿ ತಿಳಿಸಿಬಿಡುತ್ತಿದ್ದರು.

ಹೀಗೆ ಅವರ ಬಿಚ್ಚು ಮಾತುಗಾರಿಕೆ ಕುರಿತು ಅವರ ಸ್ವ ಅನುಭವದ ಕಥನಗಳಲ್ಲಿನ ಹಲವು ಪ್ರಸಂಗಗಳನ್ನು ವಿವರಿಸಬಹುದು. ಒಮ್ಮೆ ತಮಿಳು ದೇಶದ ಪ್ರಾಚೀನತೆ ಕುರಿತು ಪ್ರಶ್ನೆ ಬಂದಾಗ ಲೆಮೂರಿಯಾ ಎಂಬ ಭೂಪ್ರದೇಶದ ಊಹೆ ಅಥವಾ ಕಲ್ಪನೆ ಎಂಬುದರ ಬಗ್ಗೆ ತಮಿಳುಗರಿಗೆ ಮನಸ್ಸು ಓಲೈಯಿಸುವ ಮಾತುಗಳಾಡದೆ ಆಧಾರ ಸಹಿತವಾಗಿ ತಮ್ಮ ಜ್ಞಾನಕ್ಕೆ ಬಂದ ವಿಷಯವನ್ನು ತಿಳಿಸುತ್ತಾರೆ.

"ನೋಡಿಯಪ್ಪ ನಿಮ್ಮ ಲೆಮೂರಿಯೂ ಖಂಡ ಇತ್ತೆ; ಇಲ್ಲವೆ ಎಂಬ ಪ್ರಶ್ನೆಗೆ ಪುಸ್ತಕಗಳಲ್ಲಿ ಉತ್ತರ ಸಿಗದು ಬಹುಶಃ ಅದು ಬರೀ ಕಲ್ಪನೆಯ ಭೂ ಭಾಗ ಎಂದು ಈ ಗ್ರಂಥಕರ್ತರು ಏನೋ ಲೆಮೂರಿಯಾಯ್ಡಿ ಎಂಬದೊಂದು ಪ್ರಾಣಿವರ್ಗವಿರುವುದು ನಿಜ ಈ ಪ್ರಾಣಿಗಳು ಒಂದು ಬಗೆಯ ಮಂಗಗಳು."[೩]

ತಮಿಳು ನಾಡಿನಲ್ಲಿಯೇ ನೌಕರಿ ಮಾಡುತ್ತಿದ್ದರೂ ತಮಿಳರನ್ನು ಓಲೈಸುವ ಮಾತುಗಳನ್ನು ಆಡದೇ ವಾಸ್ತವಿಕತೆಯನ್ನು ಯಾವುದೇ ಪ್ರಶ್ನೆಗಳು ಇರಲಿ ಅದಕ್ಕೆ ಆಧಾರಸಹಿತವಾದ ಉತ್ತರ ನೀಡುತ್ತಿದ್ದರು. ತಮ್ಮ ಎದುರಿಗಿನ ವ್ಯಕ್ತಿಯ ಮನಸ್ಸಿಗೆ ಸರಿ ಎನ್ನಿಸಲಿ ಎಂದು ಸುಳ್ಳು ಹೇಳುವ ಸ್ವಭಾವವಿರಲಿಲ್ಲ. ಆಧಾರಸಹಿತವಾದ ಉತ್ತರವನ್ನು ಯಾವುದೇ ವ್ಯಕ್ತಿಗಳಿಗೆ ನೇರವಾಗಿ ಹೇಳುವ ಎದೆಗಾರಿಕೆ ಸ್ವಾಮಿಯವರಲ್ಲಿ ಇತ್ತು.

ಸ್ವಾಮಿಯವರ ನೇರ ಮತ್ತು ನಿಷ್ಠರವಾದ ವ್ಯಕ್ತಿತ್ವದ ದರ್ಶನ ಕೇವಲ ಶೈಕ್ಷಣಿಕ ಮತ್ತು ಆಡಳಿತಾತ್ಮಕ ವಿಷಯಗಳು ಅಲ್ಲದೇ ಎಲ್ಲಾ ಜ್ಞಾನ ವಲಯದಲ್ಲಿ ತೂಗಿ-ಅಳೆದು ತಮಗೆ ಸರಿ ಎನ್ನಿಸುವ ವಿಚಾರವನ್ನು ಸಂಶೋಧಕರು, ಸಾಹಿತಿಗಳು, ವಿಜ್ಞಾನಿಗಳು ಯಾರೆ ಇರಲಿ ಅವರಿಗೆ ಸ್ಪಷ್ಟವಾಗಿ ತಿಳಿಸಿಬಿಡುತ್ತಿದ್ದರು. ಇವರ ಜ್ಞಾನದ ಗುದ್ದಾಟದ ಚರ್ಚೆಯ ಮಾತುಗಳು ಕುರಿತು ಡಾ. ಎಂ. ಚಿದಾನಂದಮೂರ್ತಿಯ ಈ ಮಾತುಗಳಲ್ಲಿ ಗಮನಿಸಬಹುದು. "ವಾದ ವಿವಾದಗಳಿಗೆ

ಇಳಿಯುವುದೆಂದರೆ ತೋಳು ತೊಡೆ ತಟ್ಟಿ ಅವರು ಸದಾ ಸಿದ್ದ. ಜಗಳಕ್ಕೂ ಸರಿ, ಸ್ನೇಹಕ್ಕೂ ಸರಿ ಅವರ ಜಗಳ ಶೈಕ್ಷಣಿಕ ವಲಯದ್ದೇ ಹೆಚ್ಚು."[೪]

ಚಿದಾನಂದಮೂರ್ತಿಯವರು ಸ್ವಾಮಿಯವರ ನಿಧನದ ನಂತರ ನೆನೆಯುವ ಸಂದರ್ಭದಲ್ಲಿ ಜ್ಞಾನದ ಗುದ್ದಾಟಕ್ಕೆ ಹೀಗೆ ಸದಾ ಸಿದ್ಧರಾಗಿರುತ್ತಿದ್ದರು ಎಂಬುದನ್ನು ಹೇಳುತ್ತಾರೆ. ಅವರ ಜ್ಞಾನದ ಗುದ್ದಾಟದ ಫಲಿತಾಂಶವು ಅವರ ನೇರವಾದ ಮಾತುಗಳು ಕೇಳುಗನಿಗೆ ಕಹಿ ಎನ್ನಿಸಿದರೂ ಯಾವುದೇ ಪೂರ್ವಗ್ರಹ ಪೀಡಿತರಾಗದೇ, ನೇರವಾಗಿ ಹೇಳಿಬಿಡುತ್ತಿದ್ದರು. ಆಧಾರ ಸಹಿತವಾಗಿ ಎಲ್ಲಾ ಪ್ರಶ್ನೆಗಳಿಗೇ ತಕ್ಕ ಉತ್ತರ ನೀಡಲು ಸದಾ ಸಿದ್ಧವಾಗಿರುತ್ತಿದ್ದರು. ಅವರ ಜಗಳವೆಲ್ಲ ಶೈಕ್ಷಣಿಕ ಸಂಬಂಧಿತ ಎಂಬುದು ಸ್ಪಷ್ಟವಾಗುತ್ತದೆ.

"ಮಾತಿನ ಚಟವೊಂದನ್ನು ಬಿಟ್ಟರೆ, ಓದುಗರು ತಪ್ಪು ತಿಳಿದರೂ ಮಾತಿನಲ್ಲಿ ಅದಕ್ಕೂ ಸೈ. ಇದಕ್ಕೂ ಸೈ ಬರೀಯ ಕಾಡು ಹರಟಯೇ ಅದರಲ್ಲಿಯೇ ಸಿದ್ಧ ಹಸ್ತರು. ಶೈಕ್ಷಣಿಕ ಚರ್ಚೆಯ ಅದರಲ್ಲೂ ಅಸಾಧ್ಯರು."[೫] ಎಂಬ ಚಿದಾನಂದಮೂರ್ತಿ ಸ್ವಾಮಿಯವರ ಮಾತಿನ ಶೈಲಿ ಕುರಿತು ಹೇಳುವುದು ಸ್ವಾಮಿಯವರು ಎಂತಹ ಮಾತುಗಾರರಾಗಿದ್ದರು ಎಂಬುದು ತೋರಿಸುತ್ತದೆ.

ಸ್ವಾಮಿಯವರ ಮಾತುಗಾರಿಕೆಯಲ್ಲಿ ಮೊನಚು ಇರುತ್ತಿತ್ತು. ತಮ್ಮ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ತಿಳಿಸುತ್ತಿದ್ದರು. ಅವರ ಮಾತಿನ ಚಟ ಜ್ಞಾನದ ಹಠಕ್ಕೆ ಕಾರಣವಾಗುತ್ತಿತ್ತು. ಅವರ ಮಾತಿನ ಪರಿ ಸಂಶೋಧನೆಗೆ ಎಡೆಮಾಡಿಕೊಡುತ್ತಿತ್ತು. ಚಿಂತನೆಗೆ ದಾರಿಯಾಗಿರುತ್ತಿತ್ತು. ಹಲವು ಪ್ರಾಚೀನ-ಅರ್ವಾಚಿನ ಯಾವುದೇ ವಿಷಯಗಳ ಮೇಲೆ ಬೆಳಕು ಚೆಲ್ಲುವ ಅವರ ಮನೋಭಾವ ಯಾವುದೇ ಜ್ಞಾನಶಿಸ್ತು ಇರಲಿ ಅದರ ವಸ್ತುವಿಷಯದ ಆಳ-ಅಗಲದ ಅರಿತು ಗುದ್ದಾಡುವ ಮನೋಭಾವ ಇವರದಾಗಿತ್ತು. ಸಮಸ್ಯೆಯೋ ಪರಿಹಾರಯಾಗುವರೆಗೂ ಬಿಡುತ್ತಿರಲಿಲ್ಲ.

ಒಮ್ಮೆ ತಮಿಳುನಾಡಿನ ಸಸ್ಯಗಳ ಬಗ್ಗೆ ಚರಿತ್ರೆಯನ್ನು ಬರೆದುಕೊಡಿ ಎಂದಾಗ ಇಲ್ಲದ ವಿಷಯವನ್ನು ಇದೆ ಎಂದು ಸಾಧಿಸಿ ಅನುಕಂಪ, ಆಧಾರ, ಗೌರವವನ್ನು ಪಡೆಯಬೇಕು ಎಂಬ ಮನೋಭಾವದವರಾಗಿದಿಲ್ಲ. ತಮ್ಮ ಮಾತಿನ ಚುರುಕಿನ ಮೂಲಕ ನೈಜತೆಯ ನೆಲೆಯಲ್ಲಿ ಹೀಗೆ ಮಾತುನಾಡುತ್ತಾರೆ.

"ನೋಡಿ ಶಾಸ್ತ್ರದ ದೃಷ್ಟಿಯಿಂದ ಮಾತನಾಡುತ್ತೇನೆ. ಅಷ್ಟೇ ತಪ್ಪು ತಿಳಿದುಕೊಳ್ಳಬೇಡಿ. ಹೇಳುವುದನ್ನು ಗಮನವಿಟ್ಟು ಕೇಳಿ. ಅಪ ಪ್ರಚಾರದಲ್ಲಿ ತೊಡಗಬೇಡಿ. ಸಸ್ಯಗಳಲ್ಲಿ ತಮಿಳುನಾಡಿನ ಸಸ್ಯಗಳು, ತೆಲುಗು ನಾಡಿನ ಸಸ್ಯಗಳು, ಕನ್ನಡ ನಾಡಿನ ಸಸ್ಯಗಳು ಎಂದೆಲ್ಲ ವಿಭಾಗಿಸುವುದು

ಸರಿಯಲ್ಲ. ಈ ಎಲ್ಲಾ ನಾಡಿನ ಸಸ್ಯ ಸಂಪತ್ತು ಹೆಚ್ಚುಕಡಿಮೆ ಒಂದೇ ಪರಿಸರ ಹೊಂದಿದ್ದಾಗಿದೆ. ದಕ್ಷಿಣ ಭಾರತಕ್ಕೆಲ್ಲ ಇದು ಅನ್ವಯವಾಗುತ್ತದೆ..."[೬]

ಪ್ರಾಚೀನ ತಮಿಳು ಸಸ್ಯಗಳು ಕುರಿತು ಬರೆದುಕೊಡು ಎಂದಾಗ ಅವರು ಸಸ್ಯ ಸಂಪತ್ತು ಒಂದು ಭೂಪ್ರದೇಶದಲ್ಲಿಯೇ ಒಂದೇ ತೆರನಾಗಿರುತ್ತದೆ. ಅದು ಭಾಷೆ ಪ್ರದೇಶಿತೆಗೆ ಅನುಗುಣವಾಗಿ ಪ್ರತೀಕವಾಗಿರುವುದಿಲ್ಲ ಎಂದು ಹೇಳುವ ಇವರು ಶೈಕ್ಷಣಿಕ ವಲಯದ ತಪ್ಪು ಹೆಜ್ಜೆಗಳಿಗೆ ದಾರಿ ಮಾಡಿಕೊಡದ ರೀತಿ ಮಾತನಾಡಿ ಸಮಸ್ಯೆ ಪರಿಹರಿಸುತ್ತಿದ್ದರು. ಇವರ ಮಾತಿನಿಂದ ಬೇರೆಯವರು ಇವರನ್ನು ನಿಷ್ಠುರವಾಗಿ ಕಂಡರೂ ಯೋಚಿಸುತ್ತಿರಲಿಲ್ಲ.  ಸ್ವಾಮಿಯವರ ಮಾತುಗಳು ಈಟಿಯಂತೆ ಇದ್ದರೂ ಇವರ ಹೃದಯ ವೈಶಾಲ್ಯತೆ ಅಪಾರವಾಗಿತ್ತು. ಪ್ರತಿಯೊಬ್ಬರೊಂದಿಗೆ ಗೌರವ ಮತ್ತು ಪ್ರೀತಿ ವಾತ್ಸಲ್ಯದಿಂದ ನಡೆದುಕೊಳ್ಳುತ್ತಿದ್ದರು. ದಯೆ, ಕರುಣೆಗೆ ಸಾಕ್ಷಿಯಾಗಿ ಈ ಪ್ರಸಂಗದ ಮೂಲಕ ಹೇಳಬಹುದು.

"ನೆಲದ ಮೇಲೆ ಸತ್ತು ಒರಗಿ ಬಿದ್ದ 'ಬಲಿ' ಹಸು, ಘರ್ಜಿಸಿಕೊಂಡು ಹೊರಳಾಡುತ್ತಿದ್ದ ಹುಲಿ, ಇನ್ನೆರಡು ತುಪಾಕಿ ಶಬ್ಧ. ಹೊರಳುತ್ತಿದ್ದ ಹುಲಿ ಚಲನೆಯಿಲ್ಲದೆ ಮಲಗಿತು ಮಚಾನಿನಿಂದ ಇಳಿದು ಹತ್ತಿರ ಹೋಗಿ ನೋಡಿದೆವು. 'ಬಲಿ'ಯೂ ಗುಂಡೇಟಿನಿಂದ ಸತ್ತಿತ್ತು. ಹುಲಿಯೂ ಗುಂಡೇಟಿನಿಂದ ಸತ್ತಿತ್ತು. ಇದು ಹಸುವಿನ ಷಿಕಾರಿಯೋ ಹುಲಿಯ ಷಿಕಾರಿಯೋ ನಮಗೆ ಅರ್ಥವಾಗಿರಲಿಲ್ಲ. ಮೂಕ ಪ್ರಾಣಿಯ ಸಾವಿಗಾಗಿ ಯಾರು ವ್ಯಥೆಪಟ್ಟಂತೆ ತೋರಲಿಲ್ಲ."[೭]

ಅರಣ್ಯದ ಪ್ರವಾಸದಲ್ಲಿ ಹುಲಿ ಬೇಟೆಯನ್ನಾಡಿ ಅದನ್ನು ಕೊಂದುದಕ್ಕಾಗಿ ಬೇಟೆಗಾರರಿಗೆ ಅನುಕಂಪ ಬರಲಿಲ್ಲ. ಆದರೆ ಮೂಕ ಪ್ರಾಣಿಯ ಜೀವ ರೋಧಿಸುವ ದೃಶ್ಯಕಂಡು ಸ್ವಾಮಿಯವರ ಹೃದಯ ವೇದನೆ ಪಡುತ್ತದೆ. ಸ್ವಾಮಿಯವರ ಮಾತುಗಳು ಅವರ ಅಭಿಪ್ರಾಯ ನಿಷ್ಠುರತೆಯಿಂದ ಕೊಂಡಿದ್ದರು. ಅವರು ಅನುಕಂಪದ ಮನೋಭಾವಯುಳ್ಳವರಾಗಿದ್ದರು.

ಆರ್. ಶೇಷಶಾಸ್ತ್ರೀಯವರು ಸ್ವಾಮಿಯವರ ವ್ಯಕ್ತಿತ್ವ ಕುರಿತು ಹೀಗೆ ಹೇಳುತ್ತಾರೆ. "ಯಾರ ಬಗ್ಗೆಯೇ ಆಗಲಿ ತಮಗಿರುವ ಅನುಕಂಪವನ್ನು ಅವರು ಮಾತಿನಲ್ಲಿ ವ್ಯಕ್ತಪಡಿಸಿದವರೇ ಅಲ್ಲ. ಕೇವಲ ಬಾಯಿ ಉಪಚಾರ ಅವರಿಗೆ ತಿಳಿದೇ ಇರಲಿಲ್ಲ. ಏನಿದ್ದರೂ ಕೃತಿಯ ಮೂಲಕವೇ. ತಾವು ಮಾಡಿದ ಸಹಾಯ ಯಾರ ಮುಂದೆ ಹೇಳುವುದರಲ್ಲಿ ತಾವೇ ಅದನ್ನು ಎಂದೂ ನೆನಸಿಕೊಂಡವರಲ್ಲ."[೮] ಆರ್. ಶೇಷಶಾಸ್ತ್ರೀಯವರು ಹೇಳುವಂತೆ ತುಂಬ ಸಹಾಯ ಮಾಡುವ ಮನೋಭಾವ ಹೊಂದಿದ್ದರು.

## ಸ್ನೇಹಜೀವಿ ಬಿ.ಜಿ.ಎಲ್. ಸ್ವಾಮಿ

ಬಿ.ಜಿ.ಎಲ್. ಸ್ವಾಮಿಯವರ ಮಾತು ಒರಟು ಆದರೂ ಅವರ ಸ್ನೇಹದ ಅಪ್ಪುಗೆ ಮೃದುವಾದದ್ದು. ಬಿ.ಜಿ.ಎಲ್.ರ ಸ್ನೇಹದ ಅಪ್ಪುಗೆಯನ್ನು ಖ್ಯಾತ ಸಾಹಿತಿಗಳು ವಿಜ್ಞಾನಿಗಳು, ಲೇಖಕರು ಅಷ್ಟೇ ಅಲ್ಲದೇ ದೇಶ-ವಿದೇಶಗಳಲ್ಲಿಯೋ ಕೂಡ ಅವರ ಸ್ನೇಹ ಸವಿದವರನ್ನು ಕಾಣಬಹುದು. ಸ್ವಾಮಿಯವರೇ ತಮ್ಮ ಕೃತಿಗಳಲ್ಲಿ ದಾಖಲಿಸಿದಂತೆ ತಮ್ಮ ಆತ್ಮೀಯರ ಬಗ್ಗೆ ಹೇಳುವ ಮಾತುಗಳು ಅವರು ಅವರು ಅಂತಹ ಸ್ನೇಹಜೀವಿಯಾಗಿದ್ದರು ಎಂಬುದನ್ನು ತೋರಿಸುತ್ತದೆ. ಅವರ ಮೊದಲ ಕೃತಿ 'ಅಮೇರಿಕಾದಲ್ಲಿ ನಾನು' ಈ ಕೃತಿಯಲ್ಲಿ ಟಬ್ ದಂಪತಿಗಳನ್ನು ಪರಿಚಯಸುತ್ತಾ ಅವರ ಆತ್ಮೀಯತೆಯನ್ನು ನೆನೆಯುವುದು ಅವರ ಸ್ನೇಹ ಭಾವದ ಪ್ರತೀಕವಾದ ಕಾಣುತ್ತದೆ. ಹಾಗೇ ಅಮೇರಿಕಾದಲ್ಲಿ ತಮ್ಮಗೆ ಸ್ನೇಹಿತರಾದವರ ಕುರಿತು ಹೀಗೆ ಹೇಳುತ್ತಾರೆ.

"ನನಗೆ ಅಮೇರಿಕಾದಲ್ಲಿ ಅನೇಕ ಜನ ಗೆಳೆಯರಾಗಿದ್ದರು. ನನಗಿಂತ ಚಿಕ್ಕವರು ನನ್ನ ವಯಸ್ಸಿನವರು, ನನಗಿಂತ ದೊಡ್ಡವರು, ತೀರ ದೊಡ್ಡವರು ನನ್ನ ತಾತನ ವಯಸ್ಸಿನವರು ಕಸುಬುದಾರರಲ್ಲಿ ವಿಜ್ಞಾನಿಗಳು, ಚಿತ್ರಗಾರರು, ಸಂಗೀತಗಾರರು, ಸಾಹಿತಿಗಳು; ಸಾಮಾಜಿಕ ಶ್ರೇಣಿಯಲ್ಲಿ ಕೆಳ ಅಂತಸ್ತಿನವರು, ಮಧ್ಯಮ ಅಂತಿಸ್ತಿನವರು ಮೇಲುಂತಿಸ್ತಿನವರು ಇತ್ಯಾದಿ."[೯]

ಅಮೇರಿಕಾದಲ್ಲಿ ತಮ್ಮ ಸ್ನೇಹಕ್ಕೆ ಪರವಶರಾದವರ ಕುರಿತು ಸ್ವಾಮಿಯವರು 'ಅಮೇರಿಕಾದಲ್ಲಿ ನಾನು' ಕೃತಿಯಲ್ಲಿ ತಮ್ಮ ಸ್ನೇಹದ ಬಾಂಧವ್ಯವನ್ನು ಹೇಳುತ್ತಾ ವಿದ್ವತ್ ವಲಯದ ಚಿರಪರಿಚಿತರೆಲ್ಲರೂ ಸ್ವಾಮಿಯ ಗೆಳತನಕ್ಕೆ ಮಾರುಹೋಗಿದ್ದರು. ಅವರ ಮಾತಿನ ಶೈಲಿ ಜ್ಞಾನಕ್ಕಾಗಿ ಹಂಬಲಿಸುತ್ತಿದ್ದರು. ಅವರ ಸರಳ ವ್ಯಕ್ತಿತ್ವ ಪ್ರತಿಯೊಬ್ಬರನ್ನು ಆಕರ್ಷಿಸುತ್ತಿತ್ತು. ಸ್ವಾಮಿಯವರ ಸ್ನೇಹದ ಗಾಢತೆಯನ್ನು ಕುರಿತು ಪ್ರೊ. ಜಿ. ವೆಂಕಟ ಸುಬ್ಬಯ್ಯನವರು ಹೇಳಿದ ಮಾತುಗಳು. ಸ್ವಾಮಿಯವರು ಎಂತಹ ಸ್ನೇಹಜೀವಿ ಎಂಬುದನ್ನು ತೋರಿಸುತ್ತದೆ.

"ಉಮರ್ ಖಯ್ಯಾಮನ ಎರಡು ಬೇರೆ ಬೇರೆ ಚಿತ್ರಗಳನ್ನು ಸ್ನೇಹದ ಗುರುತಿಗಾಗಿ ಕೊಟ್ಟರು. ಇಂದಿಗೂ ಅವು ನನ್ನ ವಸ್ತು ಸಂಗ್ರಹದಲ್ಲಿವೆ. ಅಂದಿನಿಂದ ಮೊದಲಾದ ನಮ್ಮ ಸ್ನೇಹ ಮೊನ್ನೆ ಅವರು ಇದ್ದಕ್ಕಿದ್ದಂತೆ ನಿಧನ ಹೊಂದುವವರೆಗೆ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿತು."[೧೦]

ಪ್ರೊ. ಜಿ. ವೆಂಕಟಸುಬ್ಬಯ್ಯನವರು ಹೇಳುವಂತೆ ಬಿ.ಜಿ.ಎಲ್. ಸ್ವಾಮಿಯವರು ನೀಡಿದ ನೆನಪಿನ ಕಾಣಿಕೆ ವಸ್ತು ಸಂಗ್ರಹಾಲಯದಲ್ಲಿ ಅವರ ನೆನಪಿಗಾಗಿ ಸಂಗ್ರಹಿಸಿದ್ದು, ಸ್ವಾಮಿಯವರು ತಮ್ಮ ಸ್ನೇಹಿತರ ಮೇಲೆ ಎಂತಹ ಪ್ರಭಾವ ಬೀರಿದರು ಎಂಬುದು ಕಾಣಬಹುದು. ಸ್ವಾಮಿಯವರೂ ಕೊನೆಯವರೆಗೆ ಎಲ್ಲರನ್ನೂ ಸ್ನೇಹ ಭಾವದಿಂದ ಕಂಡವರು. ಅವರ ನಿಧನದ ನಂತರ ಹಲವು ಗಣ್ಯರು ಕಂಬನಿ ಮಿಡಿದಿದ್ದರು. ಸ್ವಾಮಿ ಭಾವಜೀವಿ ಎಂಬುದಕ್ಕೆ ಸಾಕ್ಷಿಯಾಗಿದೆ.

"He had a large member of friends in Madras and he tried to meet every one of them during this visit."[೧೧] (Dr. T.R. Govindachari)

ಸ್ವಾಮಿಯವರು ಮದ್ರಾಸ್‌ಗೆ ಹೋದಾಗ ಪ್ರತಿಯೊಬ್ಬ ಸ್ನೇಹಿತರನ್ನು ಭೇಟಿಯಾಗುತ್ತಿದ್ದರು. ಅವರಿಗೆ ಮದ್ರಾಸ್‌ನಲ್ಲಿ ತುಂಬಾ ಜನ ಸ್ನೇಹಿತರು ಇದ್ದರು. ತಮ್ಮ ಭೇಟಿಯಲ್ಲಿ ಎಲ್ಲರನ್ನು ಕಾಣುವ ಪ್ರಯತ್ನ ಮಾಡುತ್ತಿದ್ದರು. ಅವರ ಕುಟುಂಬಸ್ಥರಂತೆ ಇದ್ದ ಡಾ. ಟಿ.ಆರ್. ಗೋವಿಂದಚಾರ್ಯ ಅವರು ಸ್ವಾಮಿಯವರನ್ನು ನೆನೆಯುವುದು ಅವರು ಸ್ನೇಹಜೀವಿ ಎಂಬುದನ್ನು ತೋರಿಸುತ್ತದೆ. ಸ್ವಾಮಿಯವರ ಹಾಸ್ಯಭರಿತ ಮಾತುಗಳು, ವ್ಯಂಗ್ಯ ಅವರ ಆಗಾಧ ಜ್ಞಾನಶಿಸ್ತು ಇತರರನ್ನು ಸೆಳೆಯುವ ವ್ಯಕ್ತಿತ್ವ ಬಿ.ಜಿ.ಎಲ್. ಅವರಲ್ಲಿ ಕಾಣಬಹುದಾಗಿತ್ತು ಎಂದು ಡಾ. ಜೆ.ಎಚ್.ನಾಯಕರು ಸ್ವಾಮಿಯವರನ್ನು ಸ್ಮರಿಸುತ್ತಾ ಅವರ ಸ್ನೇಹದ ಸ್ವಭಾವವನ್ನು ಹೇಳುತ್ತಾರೆ. "ಆಯಾಚಿತವಾಗಿ ದೊಡ್ಡವರೊಬ್ಬರ ಸ್ನೇಹದ ಭಾಗ್ಯ ಲಭಿಸುವಂತಾಗಿದೆ ಎಂದುಕೊಂಡೆ. ನನ್ನ ಈ ಯಾವ ಅನಿಸಿಕೆಗಳೂ ಹುಸಿಯಾಗಲಿಲ್ಲ."[೧೨]

ಸ್ವಾಮಿಯವರು ಹುದ್ದೆ, ಜ್ಞಾನ, ವಯಸ್ಸಿನಲ್ಲಿ ತಮಗಿಂತ ಕಿರಿಯರು ಇದ್ದರೂ ಕೂಡ ಅವರು ಸ್ನೇಹಭಾವದಿಂದ ಇರುತ್ತಿದ್ದರು. ಎಲ್ಲರನ್ನು ಸೆಳೆಯುವ ವ್ಯಕ್ತಿತ್ವ ಹೊಂದಿದ್ದರು. ಸ್ವಾಮಿಯವರು ಯಾರಿಗೆ ಆಗಲಿ ಕಷ್ಟವೆಂದರೆ ಸಹಾಯ ಮಾಡುವ ಮನೋಭಾವ ಹೊಂದಿದ್ದರು. ಅವರು ಈ ಗುಣ ವಿದ್ಯಾರ್ಥಿ ದೆಸೆಯಿಂದ ತಮ್ಮ ವೃತ್ತಿಯಿಂದ ನಿವೃತ್ತಿಯಾಗುವವರೆಗೂ ಅವರ ಜೀವನ ಪಯಣದಲ್ಲಿ ಹಲವಾರು ಸ್ನೇಹಿತರನ್ನು ಸಂಪಾದಿಸಿಕೊಂಡಿದ್ದರು. ಸ್ವಾಮಿಯವರ ವ್ಯಂಗ್ಯ, ನೇರ, ಬಿಚ್ಚು ಮಾತುಗಾರಿಕೆ, ಸಾಹಿತ್ಯ, ವಿಜ್ಞಾನ, ಇತಿಹಾಸದ ಹಲವು ಕ್ಷೇತ್ರದ ಗಣ್ಯರು ಇವರ ಸ್ನೇಹದ ವೃತ್ತದಲ್ಲಿ ಇದ್ದರು. ಅವರು ಬದುಕಿನ ಕೊನೆಯವರೆಗೆ ಸ್ನೇಹಜೀವಿಯಾಗಿದ್ದರು.

**ಸಾಹಿತ್ಯಿಕ ಪರಿಸರ ಮತ್ತು ಪ್ರೇರಣೆ:**

ಡಾ. ಬಿ.ಜಿ.ಎಲ್. ಸ್ವಾಮಿಯವರ ತಂದೆಯವರಾದ ಕನ್ನಡ ಶ್ರೇಷ್ಠ ಸಾಹಿತಿ ಡಿ.ವಿ. ಗುಂಡಪ್ಪನವರ ವ್ಯಕ್ತಿತ್ವದ ನೆರಳು ಬಿ.ಜಿ.ಎಲ್. ಸ್ವಾಮಿಯವರನ್ನು ಹಿಂಬಾಲಿಸಿದೆ. ಡಾ. ಬಿ.ಜಿ.ಎಲ್. ಸ್ವಾಮಿಯವರು ಮನೆಯಿಂದ ದೂರವಿದ್ದು ವ್ಯಾಸಂಗ ಮಾಡಿದರು. ರಜೆಯ ಅವಧಿಯಲ್ಲಿ ಮನೆಗೆ ಬಂದಾಗ ಅವರ ತಂದೆಯವರ ಸಾಹಿತ್ಯದ ಛಾಯೆಯು ಅವರ ಬರವಣಿಗೆಗೆ ಪ್ರೇರಣೆಯಾಗಿತ್ತು.

ಡಾ. ಬಿ.ಜಿ.ಎಲ್. ಸ್ವಾಮಿಯವರೇ ಹೇಳುವಂತೆ ನನಗೆ ಪ್ರೇರಣೆ, ಪ್ರೋತ್ಸಾಹ ಸಾಹಿತ್ಯದಲ್ಲಿ ಅಂದ್ರೆ ನಮ್ಮ ಮನೆಯ ವಾತಾವರಣದಲ್ಲೇ ಬಂತು ಅಂತ ಹೇಳ್ತಿನಿ. ನಾನು ವಿದ್ಯಾರ್ಥಿಯಾಗಿ ಓದಿದ್ದೆಲ್ಲ ವಿಜ್ಞಾನವೇ ಆದರೂ ಮನೆಯ ವಾತಾವರಣ ಒಂದಿದೆಯಲ್ಲ ಅದರಲ್ಲಿರುವಷ್ಟು ಸಾಹಿತ್ಯದಲ್ಲಿ ಆಸಕ್ತಿ ಬಂತು ಎಂದು ಹೇಳುವ ಅವರ ಮನದ ಮಾತು ಅವರ ತಂದೆಯ ಸಾಹಿತ್ಯಿಕ ಪರಿಸರ ಇವರ ಮೇಲೆ ಪ್ರಭಾವ ಬೀರಿತು ಎಂಬುದನ್ನು ಸಮರ್ಥಿಸುತ್ತದೆ.

ಡಾ. ಬಿ.ಜಿ.ಎಲ್. ಅವರು ಮೆದು ಸಾಹಿತಿಯಾಗಿದ್ದರಿಂದ ಅವರ ಮನೆಗೆ ಕನ್ನಡ ಸಾಹಿತ್ಯ ಸರಸ್ವತಿಯ ಲೋಕದ ದಿಗ್ಗಜರಾದ 'ಗೊರೂರು ರಾಮಸ್ವಾಮಿ ಅಯ್ಯಂಗಾರ, ಡಾ. ಕೆ. ಶಿವರಾಮ ಕಾರಂತ, ಪ್ರೊ. ಬಿ.ಎಂ.ಶ್ರೀ., ಶ್ರೀ. ವಿ.ಆರ್. ಕೃಷ್ಣಶಾಸ್ತ್ರೀ, ಮುಂತಾದವರು ಅವರ ಮನೆಗೆ ಹೋಗಿಬಂದು ಮಾಡಿದ್ದು ಉಂಟು. ಇಂತಹ ಮಹನೀಯರ ಒಡನಾಟ, ಚರ್ಚೆ, ಸಂಭಾಷಣೆಯು ಬಿ.ಜಿ.ಎಲ್. ಸ್ವಾಮಿಯವರನ್ನು ಶ್ರೇಷ್ಠ ಬರಹಗಾರರನ್ನಾಗಿಸಿತು.

ತಂದೆಯ ಸಾಹಿತ್ಯಿಕ ಒಲವು ಸಾಹಿತಿಗಳ ಒಡನಾಟಗಳು ಇವರೊಬ್ಬ ವಿಜ್ಞಾನದ ವಿದ್ಯಾರ್ಥಿಯಾಗಿದ್ದರೂ ವಿಜ್ಞಾನ ಮತ್ತು ಸಾಹಿತ್ಯಗಳನ್ನು ಮೇಳೈಸುವ ಹೊಸ ಪ್ರಕಾರಕ್ಕೆ ನಾಂದಿಯಾಯಿತು. ಭಾವನಾತ್ಮಕವಾಗಿ ಸಾಹಿತ್ಯಿಕ ಸೇವೆ ವೈಜ್ಞಾನಿಕ ವಸ್ತುನಿಷ್ಠತೆ ಮಾಡಲು ದಾರಿಯಾಯಿತು.

ತಂದೆಯವರಾದ ಡಿ.ವಿ.ಜಿ. ಯವರು 'ಬೆಳೆಯುವ ಸಿರಿ ಮೊಳಕೆಯಲ್ಲಿ' ಎಂಬಂತೆ ಅವರ ಮಗನಿಗೆ ರಜೆಯ ಅವಧಿಯಲ್ಲಿ ಓದುವ ಗೀಳು ಬೆಳೆಸಿದರು. ಗ್ರಂಥ ಭಂಡಾರವೇ ಡಿ.ವಿ.ಜಿ.ಯವರ ಮನೆಯಾಗಿತ್ತು. ತಮ್ಮ ಮಗನಿಗೆ ಅಮೂಲ್ಯ ಕೃತಿಗಳ ಪರಿಚಯ ಮಾಡಿ ಕೊಡುತ್ತಿದ್ದರು. ರಜೆಯ ಅವಧಿಯಲ್ಲಿ ಕೃತಿಗಳ ಅಧ್ಯಾಯನಕ್ಕೆ ಪ್ರೇರಣೆ ನೀಡುತ್ತಿದ್ದರು. "ಕಾಲೇಜಿಗೆ ರಜೆಯಿದ್ದಾಗ ನಮ್ಮ ತಂದೆ ಡಿಕನ್ಸ್, ಡಾಕ್ಟರ್, ಸ್ಕಾಬ್ ಮೈಲ್ಡ್ ಮುಂತಾದ ಅನೇಕ ಲೇಖಕರ

ಸಂಪೂರ್ಣ ಕೃತಿಗಳನ್ನು ಕಪಾಟಿನಲ್ಲಿ ತೋರಿಸಿ ಈ ರಜೆಯಲ್ಲಿ ಇವೆಲ್ಲ ಪುಸ್ತಕಗಳನ್ನು ಓದು ಎನ್ನುತ್ತಿದ್ದರು. ಓದದೆ ತಪ್ಪಿಸಿಕೊಳ್ಳುವಂತಿರಲಿಲ್ಲ. ರಜೆ ಮುಗಿಯುವ ಹೊತ್ತಿಗೆ ನಾನು ಅವರು ಸೂಚಿಸಿದ ಪುಸ್ತಕಗಳನ್ನು ಓದಿದ್ದೇನೆಯೋ ಇಲ್ಲವೋ ಅಂತ ಪರೀಕ್ಷಿಸಲು, 'ಡಿಕನ್ಸ್‌ನ ಡೇವಿಡ್ ಕಾಪರ್ ಫೀಲ್ಡ್' ಕೃತಿಯಲ್ಲಿ ಬರುವ ಲಿಟಲ್ ಎಮೀಲಿಯ ಪಾತ್ರ ಹೇಗಿದೆ ಹೇಳು? ಎನ್ನುತ್ತಿದ್ದರು. ಹೀಗಾಗಿ ನಾನು ವಿದ್ಯಾರ್ಥಿಯಾಗಿದ್ದಾಗಲ್ಲಿಯೇ ಇಂಗ್ಲೀಷ್ ಸಾಹಿತ್ಯದ ಅನೇಕ ಕೃತಿಗಳು ಓದಿಬಿಟ್ಟಿದೆ."[೧೩]

ಡಿ.ವಿ.ಜಿ.ಯವರ ಆಜ್ಞೆಯನ್ನು ಪಾಲಿಸಿ ಸ್ವಾಮಿಯವರು ಇಂಗ್ಲೀಷ್, ಕನ್ನಡ ಸಾಹಿತ್ಯದಲ್ಲಿ ವಿದ್ಯಾಥಿಯಾಗಿದ್ದಾಗಲೇ ಪಾಂಡಿತ್ಯದ ವೇದಿಕೆಗೆ ಬಂದು ನಿಂತಿದ್ದರು. ಕೃತಿಗಳು ಓದುವುದಕ್ಕೆ ಅಲ್ಲದೇ ಅದರ ಪಾತ್ರ ಚಿತ್ರಣ ವಿಷಯ ವಸ್ತುವಿನ ಬಗ್ಗೆ ತಮ್ಮ ತಂದೆಯವರ ಪ್ರಶ್ನೆಗಳಿಗೆ ಉತ್ತರ ನೀಡುತ್ತಿದ್ದಿದ್ದು ಅವರನ್ನು ಸ್ವಾಮಿಯವರನ್ನು ಸಾಹಿತ್ಯದ ಬರಹಗಾರರನ್ನಾಗಿಸಲು ಪ್ರೇರಣೆಯಾಯಿತು.

ಡಾ. ಬಿ.ಜಿ.ಎಲ್. ಸ್ವಾಮಿಯವರ ಕಾಲೇಜು ವಿದ್ಯಾಭ್ಯಾಸದಲ್ಲಿ ತಿ.ನಂ.ಶ್ರೀ., ವಿ.ಸೀ., ಎ.ಆರ್. ಕೃಷ್ಣಶಾಸ್ತ್ರೀಯವರ ಒಡನಾಟವು ಇವರ ಸಾಹಿತ್ಯದ ಗೀಳು ಮರವಾಗಲು ಕಾರಣವಾಯಿತು.

ಮೂಲತಃ ವೃತ್ತಿಯಿಂದ ಸಸ್ಯಶಾಸ್ತ್ರದ ಪ್ರಾಧ್ಯಾಪಕರಾದರು. ಸಸ್ಯಶಾಸ್ತ್ರದ ಜ್ಞಾನವನ್ನು ಸಾಹಿತ್ಯದ ಮೂಲಕ ವಿವರಿಸಿದರು. ಸ್ಮಾಮಿಯವರೇ ಹೇಳುವಂತೆ ಸಸ್ಯಶಾಸ್ತ್ರದ ಬಗ್ಗೆ ಎಲ್ಲರೂ ತಿಳಿದುಕೊಳ್ಳಲಿ ಎಂಬ ಬಯಕೆಯಿಂದ ಸಾಹಿತ್ಯದ ವ್ಯಕ್ತಿಗಳಿಗಾಗಿ ಸಸ್ಯಗಳ ವಿಷಯವನ್ನು ಸಮಗ್ರ ರೀತಿಯಲ್ಲಿ ವಿಷಯವನ್ನು ವಿವೇಚಿಸಿದರು.

"ನಂಗೆ ಒಂದು ಜನಪ್ರಿಯ ವಿಜ್ಞಾನದಲ್ಲಿ ಬರೆದುಕೊಂಡು ಒಂದು ಸೂಚನೆ ಕೊಟ್ಟು ಅದಕ್ಕೆ ಒಂದು ಊರುಗೋಲು ಕೊಟ್ಟೋರು. ಡಾ. ಎ.ಆರ್. ಕೃಷ್ಣಶಾಸ್ತ್ರೀಗಳು ಅಂತ ನಾನು ಈವತ್ತಿನವರೆಗೂ ನೆನಿಸಿಕೊಳ್ಳುತ್ತೇನೆ"[೧೪] ಎಂದು ಡಾ. ಬಿ.ಜಿ.ಎಲ್. ಸ್ವಾಮಿಯವರು ವಿಜ್ಞಾನವನ್ನು ವಿಜ್ಞಾನೇತರ ವ್ಯಕ್ತಿಗಳು ಸ್ವಲ್ಪ ಮಟ್ಟಿಗಾದರೂ ತಿಳಿದುಕೊಳ್ಳಲಿ ಎಂಬ ಉದ್ದೇಶದಿಂದ ಸಸ್ಯಶಾಸ್ತ್ರ ಸಾಹಿತ್ಯದ ಸ್ಪರ್ಶ ನೀಡಿದರು. ಎ.ಆರ್. ಕೃಷ್ಣಶಾಸ್ತ್ರೀಯಂತವರ ವಿಚಾರಗಳು ಈವರೆಗೆ ಜನಪ್ರಿಯ ವಿಜ್ಞಾನ ಬರಹಕ್ಕೆ ಪ್ರೇರಣೆ ನೀಡಿತು. ಸೆಂಟ್ರಲ್ ಕಾಲೇಜಿನ ಸಾಹಿತ್ಯಿಕ ವಾತಾವರಣವು ೧೯೩೯ರಲ್ಲಿ ಮೊದಲ ಬಾರಿಗೆ ಕದಂಬ ವೃಕ್ಷದ ಕುರಿತು ಲೇಖನವನ್ನು ಬರೆಯಲು ಕಾರಣವಾಯಿತು.

ಕನ್ನಡದಲ್ಲಿ ಬರೆಯುವ ಅಭ್ಯಾಸ ಮಾಡಿಕೊಳ್ಳಲು ಎ.ಆರ್. ಕೃಷ್ಣಶಾಸ್ತ್ರೀಗಳು ನೀಡಿದ ಪ್ರೇರಣೆಯಿಂದ ಇವರ ಮೊದಲ ಲೇಖನ ಕದಂಬ ಹಿಂದೂ ಪತ್ರಿಕೆಯ ಸಂಚಿಕೆಯಲ್ಲಿ ಪ್ರಕಟವಾಯಿತು.

ಡಾ. ಹಾ.ಮ.ನಾಯಕ, ಶಿವರಾಮ ಕಾರಂತರಂತಹ ಸಾಹಿತಿಗಳ ಜೊತೆ ಇವರು ಪತ್ರ ವ್ಯವಹಾರ ಸಾಹಿತ್ಯಿಕ ಚರ್ಚೆಯ ಅನಿಸಿಕೆಗಳ ವಿನಿಮಯವನ್ನು ಮಾಡಿಕೊಳ್ಳುತ್ತಿದ್ದರು. ಅವರಲ್ಲಿ ಸಾಹಿತ್ಯಿಕ ಪ್ರತಿಭೆಯು ಸಾಹಿತ್ಯವಲಯದ ಹಿರಿಯ ಮತ್ತು ಕಿರಿಯರೊಂದಿಗಿನ ಒಡನಾಟ ಇವರಿಗೆ ಸಾಹಿತ್ಯದ ನಕ್ಷತ್ರವನ್ನಾಗಿಸಲು ಸ್ವಾಮಿಯವರಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಅನೇಕ ಕೃತಿಗಳು ಬಂದವು. ಸಾಹಿತ್ಯದ ನೆರಳಲ್ಲಿ ಬೆಳೆದ ಸ್ವಾಮಿಯವರು ಸಾಹಿತ್ಯದ ದಾರಿಯಲ್ಲಿ ಜನರಿಗೆ ವಿಜ್ಞಾನದ ಜ್ಞಾನ ನೀಡಲು ಅವರ ಬರವಣಿಗೆ ಸಹಾಯಕವಾಯಿತು.

ಕನ್ನಡ ಸಾಹಿತ್ಯ ಭಾಷೆಯ ಬಗ್ಗೆ ಅವರಿಗೆ ಅಪಾರ ಅಭಿಮಾನ, ಗೌರವವಿತ್ತು. ತಮ್ಮ ತಂದೆಯವರು ಹಾಕಿಕೊಟ್ಟ ಹಾದಿಯಲ್ಲಿ ತಮ್ಮ ವಿಶಿಷ್ಟವಾಗಿ ಗುರುತಿಸಿಕೊಂಡರು.

**ಜ್ಞಾನದಾಹಿ:**

ಬಿ.ಜಿ.ಎಲ್. ಸ್ವಾಮಿಯವರಿಗೆ ಪ್ರತಿಯೊಂದು ಕ್ಷೇತ್ರದಲ್ಲಿ ಆಸಕ್ತಿಯಿತ್ತು. ಪ್ರತಿಯೊಂದು ಕ್ಷೇತ್ರದಲ್ಲಿನ ಜ್ಞಾನದ ವಿವಿಧ ಮಜಲುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ವಿದ್ಯಾರ್ಥಿ ದೆಸೆಯಿಂದಲೇ ಇವರು ಇಂಗ್ಲೀಷ್, ಕನ್ನಡ ಸಾಹಿತ್ಯ ಓದಿದ್ದರು. ಜೀವನದ ಪ್ರತಿಯೊಂದು ಹಂತದಲ್ಲೂ ಹೊಸ ಕಲಿಕೆಯ ಬಗ್ಗೆ ಗಮನಹರಿಸುತ್ತಿದ್ದರು. ಇವರು ಪ್ರಾಧ್ಯಾಪಕರಾದಾಗ ಸಸ್ಯ ಶಾಸ್ತ್ರದ ಚರಿತ್ರೆಯ ವಿಷಯವನ್ನು ಪಠ್ಯವಾಗಿ ಅಳವಡಿಸಿದಾಗ ಅವರು ಶಾಸನಗಳ ಬಗ್ಗೆ ಅಧ್ಯಯನ ಮಾಡಿದರು. ಈ ಅಧ್ಯಯನ ಕೇವಲ ಮೇಲ್ನೋಟಕ್ಕೆ ಇರದೇ ದಕ್ಷಿಣ ಭಾರತದ ಶಾಸನಗಳ ಆಳವಾದ ಅಧ್ಯಯನವಾಗಿತ್ತು. ಶಿವರಾಮಮೂರ್ತಿ, ಡಾ. ಎಂ. ಚಿದಾನಂದ ಮೂರ್ತಿಯವರ ಶಾಸನಗಳ ಸಂಶೋಧನೆಯ ಅಧ್ಯಯನದ ಬಗ್ಗೆ ಅಭ್ಯಾಸಮಾಡಿದರು.

ಇವರ ಜ್ಞಾನದಾಹಕ್ಕೆ ಇನ್ನೊಂದು ಸಾಕ್ಷಿ ಎಂದರೆ ಇವರು ಬಹು ಭಾಷೆ ವಿಶಾರದರಾಗಿದ್ದು ದೇಶೀಯ ಭಾಷೆಗಳಲ್ಲದೆ ಪ್ರಪಂಚದ ಪ್ರಮುಖ ಭಾಷೆಗಳಲ್ಲಿ ಇವರು ಸಾಮರ್ಥ್ಯ ಸಾಧಿಸಿದ್ದರು. ಕನ್ನಡ ತೆಲುಗು, ತಮಿಳು, ಸಂಸ್ಕೃತ, ಇಂಗ್ಲೀಷ್, ಫ್ರೆಂಚ್, ಜರ್ಮನ್, ಕೊಂಚ ಮಟ್ಟಿಗೆ ಮಲಿಯಾಳಂ ಭಾಷೆ ತಿಳಿದಿದ್ದರು ಎಂಬುದಕ್ಕೆ ಅವರೇ ಒಂದು ಸಂದರ್ಶನದಲ್ಲಿ ನೀಡಿದ ಹೇಳಿಕೆ ಗಮನಿಸಬಹುದು.

"ಪ್ರಶ್ನೆ: ನೀವು ಕಲಿತಿರುವ ಭಾಷೆಗಳು?

ಡಾ. ಸ್ವಾಮಿ ಜರ್ಮನ್, ಲ್ಯಾಟಿನ್, ಫ್ರೇಂಚ್ ಅಲ್ಪಸ್ವಲ್ಪ ಸ್ಪಾನಿಷ್ ಜೊತೆಗೆ ಕನ್ನಡ, ಇಂಗ್ಲೀಷ್, ತೆಲುಗು, ತಮಿಳು, ಸ್ವಲ್ಪ ಮಟ್ಟಿಗೆ ಮಲಯಾಳಂ.

ಪ್ರಶ್ನೆ: ನೀವು ಫ್ರೇಂಚ್ ಭಾಷೆಯನ್ನು ಯಾವಾಗ ಕಲಿತೀರಿ?

ಸ್ವಾಮಿ: ಬೆಂಗಳೂರಿನಲ್ಲೇ ಕಲಿತೆ. ನಾನು ಸೆಂಟ್ರಲ್ ಕಾಲೇಜಿನಲ್ಲಿದ್ದಾಗ ಥಿಯೋಲಾಜಿಕಲ್ ಕಾಲೇಜಿನಲ್ಲಿ ಫ್ರೆಂಚ್ ಪಾದ್ರಿ ಒಬ್ಬರಿದ್ದರು. ಅವರ ಬಳಿ ವ್ಯಾಸಂಗ ಮಾಡಿದೆ ಮೋಲಿಯೇರ್, ದ್ಯೂಮ್, ಹ್ಯೋಗೋ ಮೊದಲಾದವರ ಕೃತಿಗಳನ್ನು ನಾನು ಫ್ರೇಂಚ್ ಭಾಷೆಯಲ್ಲಿಯೇ ಓದಿದ್ದೇನೆ."[೧೪]

ಪಾದ್ರಿಯವರಿಂದ ಫ್ರೆಂಚ್ ಭಾಷೆಯನ್ನು ಕಲಿತು ಫ್ರೆಂಚ್‌ನ ಪ್ರಮುಖ ಬರಹಗಾರರ ಕೃತಿಗಳನ್ನು ಅದೇ ಭಾಷೆಯಲ್ಲಿ ಅಧ್ಯಯನ ಮಾಡಿದ್ದು, ಅವರ ಜ್ಞಾನದ ಹಸಿವು ತೋರಿಸುತ್ತದೆ.

"ಡಾ. ಯು.ಆರ್. ಅನಂತಮೂರ್ತಿಯವರು ಇಂಗ್ಲೀಷ್, ಎಂ.ಎ. ತರಗತಿಗೆ ಪಾಠ ಹೇಳುವಾಗ ವಿದ್ಯಾರ್ಥಿಯಂತೆ ಹೋಗಿ ಕುಳಿತುಕೊಳ್ಳುತ್ತಿದ್ದರು. ಅನಂತಮೂರ್ತಿಯವರು ಫ್ರೆಂಚ್ ಕೃತಿಯ ಇಂಗ್ಲೀಷ್ ಅನುವಾದವನ್ನಿಟ್ಟುಕೊಂಡು ಪಾಠ ಹೇಳುತ್ತಿದ್ದರೆ ಫ್ರೆಂಚ್ ಬಲ್ಲ ಡಾ. ಸ್ವಾಮಿ ಆಕೃತಿಗಳೆನ್ನೆಲ್ಲ ಫ್ರೆಂಚ್ ಮೂಲದಲ್ಲೇ ಓದಿಕೊಂಡಿದ್ದವರಾಗಿದ್ದರು."[೧೫]

ಎಸ್.ಎಲ್. ಭೈರಪ್ಪನವರು ಸ್ವಾಮಿಯವರನ್ನು ಸ್ಮರಿಸುತ್ತಾ ಹೇಳಿದ ಮೇಲಿನ ಮಾತುಗಳು ಸ್ವಾಮಿಯವರು ತಾವು ತಿಳಿದುಕೊಂಡ ವಿಷಯದ ಚರ್ಚೆಗೆ ತಮಗಿಂತ ಕಿರಿಯರ ವಿಚಾರವೇನು ಎಂದು ಕೇಳಲು ಅವರು ಅನಂತ ಮೂರ್ತಿಯವರ ಕ್ಲಾಸಗೆ ಕೂಡುತ್ತಿದ್ದರು. ತಮ್ಮ ಕ್ಷೇತ್ರದಲ್ಲಿ ಅಲ್ಲದೆ ಬೇರೆ ಕ್ಷೇತ್ರದಲ್ಲಿನ ವಿಷಯದ ಮನಸ್ಸು ಜ್ಞಾನದ ಅರಿವಿಗೆ ಮನಸ್ಸು ತುಡಿಯುತ್ತಿತ್ತು.

ಅವರು ವಿಭಿನ್ನ ಜ್ಞಾನ ಕ್ಷೇತ್ರಗಳಲ್ಲಿ ಜ್ಞಾನದ ಸೆಲೆಯನ್ನು ಸವಿಯಲು ಯಾವುದೇ ಗರ್ವವಿಲ್ಲದೆ ವಿದ್ಯಾರ್ಥಿಯಂತೆ ಆಸಕ್ತಿಯಿಂದ ಕೇಳಿ ಓದಿ ತಿಳಿಯುತ್ತಿದ್ದರು.

ಸ್ವಾಮಿಯವರು ಹೊಸ ವಿಷಯವನ್ನು ಕಲಿಯುವ ತವಕದಲ್ಲಿ ಇರುತ್ತಿದ್ದರು. ತಮ್ಮ ಕ್ಷೇತ್ರದ ವಿಷಯ ವಸ್ತುವಾದ ಸಸ್ಯಶಾಸ್ತ್ರವನ್ನು ಇತರರ ಜ್ಞಾನ ಕ್ಷೇತ್ರಗಳಲ್ಲಿ ಅನ್ವಯಿಸುತ್ತಿದ್ದರು. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಸ್ಯಗಳ ಉಲ್ಲೇಖದ ಬಗ್ಗೆ ತಮ್ಮ ಕೃತಿಗಳಲ್ಲಿ, ಲೇಖನಗಳಲ್ಲಿ ಹೊಸ ಹೊಸ ಸಂಶೋಧನಾತ್ಮಕ ವಿಚಾರಗಳನ್ನು ಬರೆದರು. ಸಸ್ಯಶಾಸ್ತ್ರದಲ್ಲಿ ಭಾರತೀಯ ಸಸ್ಯಗಳ ಮೂಲ ಮತ್ತು ವಿದೇಶದಿಂದ ತಂದ ಸಸ್ಯಗಳ ನಡುವೆ ಅಧ್ಯಯನ ಮಾಡಿ ಭಾರತದ ಸಸ್ಯಜಾತಿ ಎಂದು ಗುರುತಿಸುತ್ತಿದ್ದರು.

ಕೆ.ವಿ. ಪದ್ಮನಾಭರಾವ್, ಸ್ವಾಮಿಯವರನ್ನು ಸ್ಮರಿಸುತ್ತಾ ಅವರ ಜ್ಞಾನದಾಹದ ವ್ಯಕ್ತಿತ್ವವನ್ನು ಈ ರೀತಿ ಹೇಳುತ್ತಾರೆ.

"Dr. Swamy's love for knowledege was not confined to the subject of botony alone. One who had not known him as a botonist recognised him any of his other facts, as on artist, novelist, histrion, ephigraphist, archeologist, linguist or a scientist in dicipline. He revelled in joining his family in doing fine exbrodiery worth or prepuling on out of the ordinary pickle which tusted sour and sweet at once. He loved music dance and was novels tried of learning mything till the end."[೧೬]

ಸ್ವಾಮಿಯವರು ಇತಿಹಾಸ, ವಿಜ್ಞಾನ, ಸಸ್ಯಶಾಸ್ತ್ರವಲ್ಲದೆ ಮನೆಯಲ್ಲಿ ಕಸೂತಿಯನ್ನು ಕಲಿಯುವ ಹಂಬಲಪಟ್ಟಿದ್ದರು. ಅವರು ಎಲ್ಲಾ ಜ್ಞಾನದ ಕ್ಷೇತ್ರವನ್ನು ಪ್ರೀತಿಸುತ್ತಿದ್ದರು. ಅವರು ಪ್ರತಿಯೊಂದು ಹೊಸ ವಿಚಾರಗಳಿಗೆ ತಮ್ಮನ್ನು ಅಣಿಗೊಳಿಸುವ ಸೃಜನಶೀಲವಾದ ಜ್ಞಾನವಾದಿ ವ್ಯಕ್ತಿತ್ವ ಹೊಂದಿದ್ದರು ಎಂಬುದು ಪದ್ಮನಾಭರ ಮಾತು ಸ್ಪಷ್ಟಪಡಿಸುತ್ತದೆ.

**ಬಹುಮುಖಿ ಸಂಶೋಧನ ನೆಲೆ**

ಡಾ. ಬಿ.ಜಿ.ಎಲ್. ಸ್ವಾಮಿಯವರು ಹಲವು ಕ್ಷೇತ್ರಗಳಲ್ಲಲಿ ಅಂದರೆ ಭಾಷಾವಿಜ್ಞಾನ, ಸಾಹಿತ್ಯ ಮತ್ತು ಇತಿಹಾಸದಲ್ಲಿ ಸಸ್ಯಶಾಸ್ತ್ರ ಇತ್ಯಾದಿ ಎಲ್ಲ ಜ್ಞಾನವನ್ನು ಪರಿಣಿತರಾಗಿದ್ದರು. ಅವರ ಈ ಪರಿಣಿತಿಯೇ ಅಂತರ್‌ಶಿಸ್ತೀಯ ಚರ್ಚೆಗೆ ಪ್ರೇರಣೆ ನೀಡಿದೆ.

ವೈಜ್ಞಾನಿಕ ದೃಷ್ಟಿಕೋನದಲ್ಲಿ ಸಂಶೋಧನಾತ್ಮಕ ಅಧ್ಯಯನ ಮಾಡುವುದು ಇವರ ವ್ಯಕ್ತಿತ್ವದ ಸ್ಪಷ್ಟ ಮುಖವಾಗಿತ್ತು. ತಾವು ಕಂಡು ಕೇಳಿ ತಿಳಿದ ವಿಷಯವನ್ನು ವಿಭಿನ್ನವಾದ ನೆಲೆಗಳಲ್ಲಿ ಒರೆಗಲ್ಲಿಗೆ ಹಚ್ಚಿ ಅದರ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುತ್ತಿದ್ದರು. ವಿಷಯದ ಆಳವಾದ ಜ್ಞಾನವನ್ನು ಪಡೆದುಕೊಂಡು ಅದಕ್ಕೆ ತಮ್ಮದೇ ಆದ ವೈಜ್ಞಾನಿಕ ಅಭಿಪ್ರಾಯ ನೀಡುತ್ತಿದ್ದರು. ಡಾ. ಬಿ.ಜಿ.ಎಲ್. ಸ್ವಾಮಿಯವರ ಪತ್ನಿಯು ಅವರನ್ನು ಹತ್ತಿರದಿಂದ ಕಂಡು ಮಾತುಗಳು ಅವರ ಬಹುಮುಖಿ ಸಂಶೋಧನ ವ್ಯಕ್ತಿತ್ವದ ಪರಿಚಯ ನೀಡುತ್ತವೆ.

"ನನಗೆ ತಿಳಿದ ಮಟ್ಟಿಗೆ ಅವರು ಯಾವ ವಿಷಯವನ್ನೇ ಆಗಲಿ ಆಳವಾಗಿ ಯೋಚಿಸಿ ತನಗೆ ತೃಪ್ತಿ ಸಿಗುವವರೆಗೂ ಹೆಣಗಾಡಿ ಸಂದೇಹ ಪರಿಹರಿಸಿಕೊಳ್ಳುತ್ತಿದ್ದರು. ಈ ಸ್ವಭಾವ

ವಿಜ್ಞಾನಕ್ಕೆ ಮಾತ್ರವೇ ಆಗಿರದೇ ಮಿಕ್ಕ ಎಲ್ಲಾ Branch of Knowledgeಗೂ ಅನ್ವಯಿಸುತ್ತಿತ್ತು. ಅವರ ಯೋಚನೆಯ ಸರಣಿ ನಾನಾ ಕೋನಗಳಲ್ಲಿ ಓಡುತ್ತಿತ್ತು. ಅಂದರೆ ಒಂದು Problom ಅನ್ನು Analyse ಮಾಡುವ ರೀತಿ ಅದರ ಹತ್ತಿರದ or ಹಿಂದು ಮುಂದಿನ or ಸಮಕಾಲೀನದ ವಿಷಯಗಳೆಲ್ಲವನ್ನೂ ಗುಡ್ಡೆಹಾಕಿ ಒಂದೇ ಭಾಷೆಯಲ್ಲಿ ಅಲ್ಲದೆ ತೆಲುಗು, ತಮಿಳು ಆ ಕಾಲದ ಹಿಂದು ಮುಂದಿನ or ಸಮಕಾಲೀನವರುಗಳನ್ನು ತಿಳಿದು ಇದು ಹೀಗೆ ಇರಬೇಕೆಂದು ನಿರ್ಣಯಿಸುತ್ತಿದ್ದರು. ಹಲವಾರು ಉದಾಹರಣೆಗಳನ್ನು ಕೊಡಬಹುದು. ೧. ಬಸವೇಶ್ವರ ಮತ್ತು ಬಿಜ್ಜಳ ಕಾಲ, ೨. ಚಿದಂಬರ ಮತ್ತು ನಟರಾಜ."[೧೭]

ಬಿ.ಜಿ.ಎಲ್. ಸ್ವಾಮಿಯವರ ಮಡದಿ ವಸಂತ ಸ್ವಾಮಿಯವರು ತಮ್ಮ ಪತಿಯ ವ್ಯಕ್ತಿತ್ವದ ವಿವಿಧ ಆಯಾಮಗಳನ್ನು ನೀಡುತ್ತಾ, ಅಂತರಶಿಸ್ತಿನ ನೆಲೆಯಲ್ಲಿನ ಅವರ ದೃಷ್ಟಿಕೋನ ಅಧ್ಯಯನ ಕ್ರಮ ಮತ್ತು ಅವರು ತಮ್ಮ ಪತಿಯಲ್ಲಿ ಸಾಹಿತಿ, ಸಂಶೋಧಕ, ವಿಜ್ಞಾನಿ, ಇತಿಹಾಸಕಾರ, ಭಾಷಾತಜ್ಞರಾಗಿದ್ದರು ಎಂಬ ಅಂಶವನ್ನು ಕಂಡುಕೊಂಡಿದ್ದರು. ಅವರ ಈ ವ್ಯಕ್ತಿತ್ವವನ್ನು ಅವರ ಐತಿಹಾಸಿಕ ಸಾಹಿತ್ಯ ಮತ್ತು ಸಂಸ್ಕೃತಿ ಧಾರ್ಮಿಕ ವಿಚಾರಗಳ ಕುರಿತು ಬರೆದ ಈ ಬರವಣಿಗೆಗಳಲ್ಲಿ ಕಾಣಬಹುದು.

ದ್ರಾವಿಡ ಚಿಂತನೆಯ ನೆಲೆಯಲ್ಲಿ 'ತಮಿಳು ತಲೆಗಳ ನಡುವೆ' 'ನಟರಾಜ ಮತ್ತು ಚಿದಂಬರ', 'ತೊಲ್ಕಪ್ಪಿಯಂ ಕಾಲವಿಚಾರ', 'ತಮಿಳುನಾಡಿನ ಗೊಲಕ್ಕಿ ಸಂಪ್ರದಾಯ ಶೈವ ಮತ' ಮೊದಲ ನಾಲ್ವರು ಸಮಯಾಚಾರ್ಯರು, 'ತಮಿಳುನಾಡಿನ ಕಾಳಮುಖರು', ಕಳಭ್ರರ ಎಂಬ ವಿಚಾರ ಸರಣಿ ಲೇಖನ ಮತ್ತು ಕೃತಿಗಳು ಅವರ ಸಾಹಿತ್ಯಿಕ, ಧಾರ್ಮಿಕ, ಐತಿಹಾಸಿಕ, ಸಂಶೋಧನ ನೆಲೆಯ ಅಧ್ಯಯನಕ್ಕೆ ಸಾಕ್ಷಿಯಾಗಿವೆ.

ಸ್ವಾಮಿಯವರ ಬಗ್ಗೆ ಚಿದಾನಂದ ಮೂರ್ತಿಯವರು ಹೇಳುವಂತೆ "ಸಂಶೋಧನ ವಿಧಾನಗಳಲ್ಲಿ ನನಗೂ ಅವರಿಗೂ ಬಹಳ ಹೋಲಿಕೆ ಇದೆ. ಯಾವುದೇ ಸಮಸ್ಯೆ ತೆಗೆದುಕೊಂಡರೂ ಮೊದಲು ಸಾಮಾಗ್ರಿ ಸಂಗ್ರಹಣೆ ಆಗಬೇಕು. ಸ್ವಾಮಿಯವರು ಕಾಳಮುಖ ಸಮಸ್ಯೆಯನ್ನು ಕುರಿತಂತೆ ಸಾವಿರಾರು ಶಾಸನಗಳನ್ನು ಅಭ್ಯಾಸಮಾಡಿ ಬಹುಸಂಖ್ಯೆಯ ಪಟ್ಟಿಕೆಗಳ ಮೇಲೆ ಟಿಪ್ಪಣಿಗಳನ್ನು ಮಾಡಿಕೊಂಡಿದ್ದರು. ಶಾಸನಗಳಲ್ಲಿ ಗಿಡಮರಗಳನ್ನು ಕುರಿತಂತೆ ಅವರು ಬೆಂಗಳೂರು ವಿಶ್ವವಿದ್ಯಾಲಯದ ಆಶ್ರಯದಲ್ಲಿ ಕೊಟ್ಟ ಮೂರು ವಿಶೇಷ ಉಪನ್ಯಾಸಗಳಿಗೂ ಅವರು ಅದೇ ರೀತಿ ಸಿದ್ಧತೆಗಳನ್ನು ಮಾಡಿಕೊಂಡಿದ್ದರು."[೧೮]

ಚಿದಾನಂದ ಮೂರ್ತಿಯವರು ಹೇಳಿದ ಮಾತುಗಳು ಸ್ವಾಮಿಯವರ ಸಂಶೋಧನ ನೆಲೆಯನ್ನು ತೋರಿಸುತ್ತದೆ. ಯಾವುದೇ ವಿಷಯದ ಅಧ್ಯಯನವಿರಲಿ ಅದಕ್ಕೆ ಆಧಾರಸಹಿತ ಸಿದ್ಧತೆ ಹಾಗೂ ಆಳವಾದ ಅಧ್ಯಯನವನ್ನು ಮಾಡಿ ಅದಕ್ಕೆ ಪರಿಹಾರ ಕಂಡುಕೊಳ್ಳುತ್ತಿದ್ದರು. ಸ್ವಾಮಿಯವರು ಸಾವಿರಾರು ಶಾಸನಗಳ ಅಧ್ಯಯನ ಮಾಡಿದ್ದರು ಎಂಬ ಚಿದಾನಂದ ಮೂರ್ತಿಯವರ ಹೇಳಿಕೆಯು ಸ್ವಾಮಿಯವರು ಎಷ್ಟೋ ಸಂಶೋಧನ ನಿಷ್ಠರಾಗಿದ್ದರು ಎಂಬುದು ತೋರಿಸುತ್ತದೆ.

**ಚಿಕಿತ್ಸಕ ಪ್ರವೃತ್ತಿ:**

ಡಾ. ಬಿ.ಜಿ.ಎಲ್. ಸ್ವಾಮಿಯವರು ಯಾವುದೇ ವಿಷಯದಲ್ಲಿ ಅದರ ನೈಜತೆಯನ್ನು ಪರೀಕ್ಷಿಸಿ ಅದಕ್ಕೆ ಒಂದು ಆಯಾಮವನ್ನು ಕಂಡುಕೊಳ್ಳುತ್ತಿದ್ದರು. ಈ ಚಿಕಿತ್ಸಕ ಮನೋಭಾವವನ್ನು ಅವರ ಬರವಣಿಗೆಯಲ್ಲಿ ಗಮನಿಸಬಹುದು. ಸಾಹಿತ್ಯ, ಸಂಗೀತ, ಇತಿಹಾಸ, ಕಲೆ ಸಂಸ್ಕೃತಿಯ ಹೊಕ್ಕು ಅದರ ಸರಿಯಾದ ಸ್ಪಷ್ಟತೆ ಕಂಡುಕೊಳ್ಳಲು ಯಾವುದೇ ಒತ್ತಡಗಳಿಗೆ ಒಳಗಾಗುತ್ತಿರಲಿಲ್ಲ ಎಂಬಂತೆ ತಮ್ಮ ವಿಚಾರಕ್ಕೆ ಮತ್ತು ಸಂಶೋಧನೆಗೆ ಬದ್ಧರಾಗಿರುತ್ತಿದ್ದರು.

"ಎನ್. ದಿವಾಕರರು ಹೇಳುವಂತೆ ಬದುಕಿನಲ್ಲಿ ಇವರಿಗೆ ಕಠಿಣವಾದದ್ದು ಯಾವುದೂ ಇಲ್ಲ. ವಿವಿಧ ಬಗೆಯ ಅಡಿಗೆಗಳಿಂದ ಹಿಡಿದು ಪರಿಶ್ರಮ, ಸಾಹಿತ್ಯ, ಸಂಗೀತ, ಕಲೆ, ಇತಿಹಾಸ, ಸಂಸ್ಕೃತಿಗಳಲ್ಲಿದೆ"[೧೯] ಎಂಬ ದಿವಾಕರ್‌ವರ ಮಾತಿನಂತೆ ಸ್ವಾಮಿಯವರು ಬಹುಮುಖಿ ನೆಲೆಯ ಅಂತರ್‌ಶಿಸ್ತಿನ ಸಂಶೋಧಕ ಮತ್ತು ಬರಹಗಾರರದಾಗಿದ್ದರು. ಬಿ.ಜಿ.ಎಲ್. ಸ್ವಾಮಿಯವರ ಅಧ್ಯಯನ ಕ್ರಮವು ಅವರು ಪ್ರತಿಯೊಂದು ವಿಷಯದ ಸೂಕ್ಷ್ಮ ನೋಟದ ಅಧ್ಯಯನವಾಗಿತ್ತು. ಅವರು ಸಾಹಿತ್ಯ, ಕಲೆ, ಸಂಸ್ಕೃತಿ, ಇತಿಹಾಸದ ಬಗೆಗೆ ಅವರ ಕಾಳಜಿಯು ಮತ್ತು ಆಸಕ್ತಿಯು ಅವರಲ್ಲಿ ಚಿಕಿತ್ಸಕ ಮನೋಭಾವದ ವ್ಯಕ್ತಿತ್ವಕ್ಕೆ ಕಾರಣವಾಗಿದೆ. ಅವರು ಎಷ್ಟೇ ಕಷ್ಟಕರವಾದ ವಿಷಯವನ್ನು ಅರಗಿಸಿಕೊಳ್ಳುವ ಸಾಮರ್ಥ್ಯ ಪಡೆದಿದ್ದರು.

ಹದಿಮೂರನೆಯ ಶತಮಾನದ 'ಬಸವರಾಜ ದೇವರ ರಗಳೆ' ಕುರಿತು ವಾದವೊಂದನ್ನು ಡಾ. ಚಿದಾನಂದಮೂರ್ತಿಯವರ ಮುಂದಿಟ್ಟು ಅದಕ್ಕೆ ಆಧಾರ ಸಹಿತ ವಾದ ಮಾಡಿದ್ದು, ಅವರ ಚಿಕಿತ್ಸಕ ಪ್ರವೃತ್ತಿಯನ್ನು ತೋರಿಸುತ್ತದೆ. 'ಬಸವರಾಜ ದೇವರ ರಗಳೆ' ವಾಸ್ತವವಾಗಿ ಹರಿಹರನ ಕೃತಿಯಲ್ಲಿ ಈಚಿತ್ತಿಚಿನರೊಬ್ಬರು ಬರೆದು ಹರಿಹರನ ಹೆಸರಿಗೆ ವರ್ಗಾಯಿಸಿರುವ ಕೃತಿ ಎಂಬ ವಾದವೊಂದನ್ನು ಒಮ್ಮೆ ಮುಂದಿಟ್ಟಾಗ ಜೇಡರ ದಾಸಿಮಯ್ಯ ಆಗಲಿ ಹರಿಹರ ಆಗಲಿ ಅಥವಾ ಯಾವುದೇ ಸಮಸ್ಯೆ ಆಗಲಿ ಯಾರಾದರೂ ಮುಂದಿಟ್ಟು ನನಗೂ ಖುಷಿಯೇ.

ಅವರು ಹೇಳಿದರು – 'ಅದರಲ್ಲಿ ಬರುವ ಉಳ್ಳಿ ಪ್ರಸಂಗ ನೋಡಿ 'ಉಳ್ಳಿ' ಅಥವಾ 'ನೀರುಳ್ಳಿ' ಭಾರತಕ್ಕೆ ಬಂದುದು ಹದಿನಾಲ್ಕು ಅಥವಾ ಹದಿನೈದನೇ ಶತಮಾನದಷ್ಟು ಈಚೆಗೆ ಆದ್ದರಿಂದ ಆ ಕೃತಿಯೂ ಈಚಿನದಾಗುತ್ತದೆ ಎಂದರು. ನನ್ನ ಮನಸ್ಸಿಗೆ ಅದು ನಾಟಿತು. ನಾನು ಹೇಳಿದೆ. ನಿಮ್ಮ ಸಸ್ಯ ಚರಿತ್ರೆಯ ಸಂಗತಿಗಳನ್ನಿಟ್ಟುಕೊಂಡು ಬಸವರಾಜ ದೇವರ ರಗಳೆಯ ತೇದಿಯನ್ನು ಏಕೆ ಈಚೆಗೆ ಎಳೆಯುತ್ತೀರಿ? ಆ ಕೃತಿಯ ಆಧಾರದ ಮೇಲೆ ನೀರುಳ್ಳಿಯ ಇತಿಹಾಸವನ್ನೇ ಹಿಂದಕ್ಕೆ ಒಯ್ಯುವುದದಲ್ಲ. ಅವಕ್ಕೆ ಅವರು ತಲೆಯಾಡಿಸುತ್ತಾ ಇಲ್ಲ. ನೀರವಳ್ಳಿ ನಮ್ಮ ದೇಶಕ್ಕೆ ಬಂದ ಇತಿಹಾಸ ಸ್ಪಷ್ಟವಾಗಿದೆ ಎಂದರು."[೨೦]

ಡಾ. ಎಂ. ಚಿದಾನಂದ ಮೂರ್ತಿಯವರು ಹೇಳಿದಂತೆ ಅವರು ಯಾವುದೇ ವಿಷಯದಲ್ಲಿ ಅದಕ್ಕೆ ಚಿಕಿತ್ಸಕ ದೃಷ್ಟಿಯಿಂದ ನೋಡುತ್ತಿದ್ದರು. ತಮ್ಮ ವಾದಕ್ಕೆ ಬದ್ಧರಾಗಿರುತ್ತಿದ್ದ ವ್ಯಕ್ತಿತ್ವ ಅವರದ್ದಾಗಿತ್ತು. ಅವರು ತಮ್ಮ ವಿಚಾರಗಳಲ್ಲಿನ ಯಾವುದೇ ರಾಜಿ ಮಾಡಿಕೊಳ್ಳುತ್ತಿರಲಿಲ್ಲ. ಪ್ರತಿಯೊಂದು ವಿಷಯದ ಸಮಸ್ಯೆಯನ್ನು ತಾವೇ ಎತ್ತಿಕೊಂಡು ಅದಕ್ಕೆ ಆಧಾರಸಹಿತವಾದ ಪರಿಹಾರ ಸೂಚಿಸುತ್ತಿದ್ದರು. ಪ್ರತಿಯೊಂದು ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿಗಳನ್ನು ಸಂಗ್ರಹಿಸುವ ಗುಣ ಇವರದ್ದಾಗಿತ್ತು.

ಜಗತ್ತು ವಾಕ್‌ಚಾತುರ್ಯ, ಸ್ನೇಹಭಾವ, ನಿಷ್ಠ ಸಂಶೋಧಕನನ್ನು ಕಳೆದುಕೊಂಡಾಗ ಮಿಡಿದ ಹೃದಯಗಳೆಷ್ಟೋ, ಅವರ ನಿಧನ ಕನ್ನಡ ಸಾಹಿತ್ಯ ಲೋಕದಲ್ಲಿ ಎಲ್ಲಾ ಜ್ಞಾನ ವಲಯದ ಪಂಡಿತನೊಬ್ಬನ, ಅಷ್ಟೇ ಅಲ್ಲದೇ ಶಾರದೆಯ ಪುತ್ರನನ್ನು ಕಳೆದುಕೊಂಡಿದ್ದು ನಿಜ. ಸ್ವಾಮಿಯವರ ನಿಧನದ ನಂತರ ಕೆ.ಎಸ್.ನಿಸ್ಸಾರ ಅಹ್ಮದ್‌ರು ಒಂದು ಕವಿತೆಯ ಮೂಲಕ ಅವರ ವ್ಯಕ್ತಿಚಿತ್ರವನ್ನು ಈ ರೀತಿ ನೀಡಿರುವರು.

ಸಾವಿಗೆ ಅತಿಥಿ ಪರಿಚಯ

ಸಾವೇ ಹರ್ಷಪಡು ಮನವಾರ<br>
ಹೊಸ್ತಿಲಿಗೆ ಬಂದು ನಿಂತಿದ್ದಾರೆ<br>
ನಮ್ಮ ವಿ.ಐ.ಪಿ.ಗಳು<br>
ಈ ಹವೆಯ ಈ ನೆಲದ ಶೀತೋಷ್ಣ ಮಾಪಿಗಳು<br>
ಸುಸ್ವನಾಲಾಪದ ಸರಸ ಸಲ್ಲಾಪಿಗಳು<br>
ಇರುವಷ್ಟು ಹೊತ್ತು, ಇದ್ದಷ್ಟು ಕಸುವಿಂದ<br>
ಜಾಣರೆದೆ ಬಲ್ಬುಗಳು ಬೆಳಕಿಸಿದ ತಾಪಿಗಳು

ಬರಮಾಡಿಕೊ ಬಳಿಗೆ, ದಿವಾನಖಾನೆಯ ಒಳಗೆ
ವಿಲ್ಸ್‌ಫ್ಲೇಕು ಹಚ್ಚಿ, ಕೂತು ಸಲೀಸು
ಬಿ.ಜಿ.ಎಲ್. ಉದುರಿಸುವ ಮುತ್ತುಗಳನಾರಿಸು;
ಗಿಡಗಂಟೆ, ದ್ರಾವಿಡರ ಕುಲಗೋತ್ರ
ಮಹದೇವಿಯಕ್ಕನ ಮಂಗಳಸೂತ್ರ
ಶ್ರೀ ತುಳಸಿಯ ಮ್ಲೇಚ್ಛ ಜನನ
ತೊಗರಿಯ ಇಥಿಯೋಪಿಯತನ
ಇಡ್ಲಿಯ ಪೌರಾಣಿಕತೆ, ಉದ್ದಿನ ಪಾತ್ರ
.... ಸಂಶೋಧನೆಯ ಈ ಉದ್ದಗಲ ಗಾತ್ರ
ತಬ್ಬಿಬ್ಬಾಗಿಸಿ ಅಬ್ಬಬ್ಬ ಅನಿಸದಿದ್ದರೆ ಹೇಳು!
ಸಾವೇ, ಆದರಿಸು ಐನಾತಿ ಅತಿಥಿಗಳ
ಮಾನವಾಂತಃಕರಣದತಿ ವಿರಳ ರೀತಿಗಳ."[೨೧]

ನಿಸ್ಸಾರ್ ಅಹ್ಮದ್‌ರ ಈ ಕವನ ಸ್ವಾಮಿಯವರ ಒಟ್ಟು ವ್ಯಕ್ತಿತ್ವದ ಚಿತ್ರಣವನ್ನು ನೀಡುತ್ತದೆ. ವಿ.ಐ.ಪಿ. ಎಂಬ ಮಾತಿನಲ್ಲಿ ಅವರ ಮೇರು ವ್ಯಕ್ತಿತ್ವದ ಗುರುತು ಕಾಣಬಹುದು. ಸ್ವಾಮಿಯವರು ದ್ರಾವಿಡ, ಭಾಷೆ, ಇತಿಹಾಸದ ಜ್ಞಾನಿಯಾಗಿದ್ದರು ಎಂದು ಕಾಣಬಹುದು. ಹಾಗೇ ಅವರ ಸ್ನೇಹಭಾವ, ಜ್ಞಾನದ ನೆಲೆಯನ್ನು ನಿಸ್ಸಾರ್ ಅಹಮದ್‌ರ ಕವನವು ಸ್ಪಷ್ಟಪಡಿಸುತ್ತದೆ. ಸಂಶೋಧನೆಯಲ್ಲಿ ಆಳ ಅಗಲವನ್ನು ಅವರ ಸಂಶೋಧಕ ವ್ಯಕ್ತಿತ್ವ ಪರಿಚಯ ಮಾಡಿಕೊಡುತ್ತದೆ. ಸ್ವಾಮಿಯವರು  ಅವರ ವ್ಯಕ್ತಿತ್ವದ ಹಲವು ಮುಖಗಳ ದರ್ಶನವನ್ನು ಮೂಡುತ್ತದೆ. ಅವರ ಒಟ್ಟು ವ್ಯಕ್ತಿಚಿತ್ರದ ಕೆಳಮುಖ ಇಲ್ಲಿ ಅನಾವರಣವನ್ನು ಮಾಡಲಾಗಿದೆ.

ಕೆ.ಎಸ್.ನಿಸ್ಸಾರ ಅಹಮ್ಮದರ ಪದ್ಯ ಅವರ ಒಟ್ಟು ವ್ಯಕ್ತಿತ್ವಕ್ಕೆ ಪೂರಕವಾದಂತೆ ವಿಷಯದ ಶೀರ್ಷಿಕೆಯನ್ನು ಅರ್ಥೈಸುತ್ತದೆ. ಸಾಹಿತ್ಯಕ್ಕೆ ವಿಭಿನ್ನ ಆಯಾಮಗಳಿರುವಂತೆ ಬಿ.ಜಿ.ಎಲ್. ಅವರ ಸೃಜನೆಗೂ ವಿಭಿನ್ನ ದೃಷ್ಟಿಕೋನಗಳಿವೆ. ಈ ದೃಷ್ಟಿಕೋನಗಳು, ದ್ರಾವಿಡ, ಸಾಹಿತ್ಯಿಕ, ತೌಲನಿಕ, ಭಾಷಾಂತರ, ವೈಜ್ಞಾನಿಕ, ಸಂಕೀರ್ಣ, ಇತ್ಯಾದಿ ಮಾಪನಗಳನ್ನು ಒಳಗೊಂಡಿವೆ. ಯಾವ ನೆಲೆಯಿಂದಲಾದರೂ ಸರಿ. ಯಾವ ಜ್ಞಾನಶಿಸ್ತುಗಳಿಂದಾದರೂ ಸರಿ ಸಾಹಿತ್ಯ ಸೃಜನೆ ಸಾಧ್ಯ ಎಂಬುದನ್ನು ತೋರಿಸಿಕೊಟ್ಟ ಅಧ್ಯಯನ ಕ್ರಮವಾಗಿದೆ.

ಸಾಹಿತ್ಯದ ವಿಭಿನ್ನ ನೆಲೆಗಳನ್ನು ಬಿ.ಜಿ.ಎಲ್. ಅವರು ಸೃಜಿಸಿದ ಬಗ್ಗೆ ಬೇರೆ ಬೇರೆ ವಿಷಯಗಳನ್ನು ದುಡಿಸಿಕೊಂಡ ಬಗೆ ಅಧ್ಯಯನ ವಿವೇಚಿಸುತ್ತದೆ.

**ಕೊನೆಟಿಪ್ಪಣಿಗಳು**

೧. ಮೈಸೂರು ಡೈರಿ, ಪುಟ ೮೦

೨. ಪ್ರಾಧ್ಯಾಪಕ ಪೀಠದಲ್ಲಿ ಪುಟ-೪

೩. ತಮಿಳು ತಲೆಗೆ ನಡುವೆ, ಪುಟ-೧೨

೪. ಸ್ವಾಮಿಯಾನ, ಪು.ಸಂ ೧೪೦

೫. ಸ್ವಾಮಿಯಾನ, ಪು.ಸಂ ೭೮

೬. ತಮಿಳು ತಲೆಗೆ ನಡುವೆ, ಪುಟ ೧೦೧

೭. ಬೃಹದಾರಣ್ಯಕ, ಪುಟ-೬೮

೮. ಸ್ವಾಮಿಯಾನ, ಪುಟ.೧೧೩

೯. ಅಮೇರಿಕಾದಲ್ಲಿ ನಾನು ಪುಟ-೯೪

೧೦. ದಿನಾಂಕ ೦೪.೧೧.೧೯೮೦, ಬೆಂಗಳೂರು ಆಕಾಶವಾಣಿ ಕೇಂದ್ರದ ಪ್ರಸಾರ, ಸ್ವಾಮಿಯಾನ, ಪು-೬೯

೧೧. Dr. T.R. Govindachari, ಸ್ವಾಮಿಯಾನ, ಪುಟ-೨೦೭೬

೧೨. ಸ್ವಾಮಿಯಾನ, ಪುಟ-೧೫೫

೧೩. ಸ್ವಾಮಿಯಾನ ಪುಟ-೪೬

೧೪. ಸ್ವಾಮಿಯಾನ ಪುಟ-೨೯

೧೫. ಅದೇ, ಪುಟ-೧೬೦

೧೬. ಸ್ವಾಮಿಯಾನ, ಪುಟ-೨೩೩

೧೭. ಸ್ವಾಮಿಯಾನ, ಪುಟ-೩

೧೮. ಸ್ವಾಮಿಯಾನ, ಪುಟ-೭೯.

೧೯. ಸ್ವಾಮಿಯಾನ ಪುಟ-೪೧

೨೦. ಅದೇ, ಪುಟ-೮೧

೨೧. ಪ್ರಜಾವಾಣಿ ದಿನಾಂಕ: ೨೧.೧೨.೧೯೮೦, ಪ್ರಕಟಿತ ಕವನ.

## ಅಧ್ಯಾಯ ೩

# ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ ಸೃಜನೆ

ಡಾ. ಬಿ.ಜಿ.ಎಲ್. ಸ್ವಾಮಿಯವರೆಂದರೆ ಸೃಜನಶೀಲತೆ ಎನ್ನುವಷ್ಟರ ಮಟ್ಟಿಗೆ ಪ್ರಯೋಗಶೀಲತೆ ಅವರ ಬರಹಗಳಲ್ಲಿ ಕಾಣಬರುತ್ತದೆ. ಈ ಸೃಜನಶೀಲ ಮನಸ್ಸು ಹತ್ತು ಹಲವುಗಳನ್ನು ಏಕತ್ರಗೊಳಿಸುವ ಹಲವು ಮಾಧ್ಯಮಗಳನ್ನು ಹುಡುಕಿದೆ. ಈ ಮಾರ್ಗವು ಕಂಡುಕೊಂಡ ಸಾಧ್ಯತೆಗಳು, ಸಾಧನೆಯ ಸಿದ್ಧಿಗಳನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಅವರ ಒಟ್ಟು ಸಾಹಿತ್ಯ ಸೃಜನೆಯನ್ನು ಅಧ್ಯಯನದ ಅನುಕೂಲತೆಗಾಗಿ ಸಾಹಿತ್ಯಕ್ಕೆ ಮೀಸಲಾದ ಕೃತಿಗಳು ಮತ್ತು ಸಂಕೀರ್ಣ ಕೃತಿಗಳು (ಅಂದರೆ ಅವರ ಅಂತರಶಿಸ್ತೀಯ ತಿಳುವಳಿಕೆಯ ಹಿನ್ನೆಲೆಯಲ್ಲಿ ಶಾಸ್ತ್ರಗಳನ್ನು ಸಾಹಿತ್ಯಿಕ ಕ್ರಮದಲ್ಲಿ ನಿರೂಪಿಸುವ ಕ್ರಮದಲ್ಲಿ) ಈ ಕೃತಿಗಳನ್ನು ವರ್ಗೀಕರಿಸಲಾಗಿದೆ. ಇಲ್ಲಿ ವರ್ಗೀಕರಣದ ಅಗತ್ಯತೆಯನ್ನು ಹೇಳಲೇಬೇಕಾಗುತ್ತದೆ. ಅವರ ಬರವಣಿಗೆ ಕ್ರಮವು ಯಾವ ಕೃತಿ ಯಾವ ವಸ್ತು ವಿಷಯಗಳನ್ನೊಳಗೊಂಡಿದೆ ಎಂಬುದನ್ನು ಬೇರ್ಪಡಿಸಲಾರದಷ್ಟು ಗಹನವಾಗಿದೆ. ಅವರ ಇಡೀ ಬರಹವೇ ಸಸ್ಯಜ್ಞಾನದ ಸಮೃದ್ಧತೆಯ ಹಿನ್ನೆಲೆ ಎಂಬಂತೆ ನಿಬಿಡವಾದ ಕಾನನದಂತಿದೆ. ಅಲ್ಲಿ ಏನಿಲ್ಲ? ಎಲ್ಲವೂ ಇದೆ. ಇರುವುದಾದರೂ ಏನು ಮತ್ತು ಎಷ್ಟು ಎಂಬ ಪ್ರಶ್ನೆಗೆ ಮಾತ್ರ ಉತ್ತರ ಸಿಗುವುದು ಕಷ್ಟ. ಈ ಹಿನ್ನೆಲೆಯಲ್ಲಿ ಸಂಪೂರ್ಣವಾಗಿ ಸಾಹಿತ್ಯಿಕ ಕೃತಿಗಳು, ಅನ್ಯಜ್ಞಾನ ಶಿಸ್ತುಗಳನ್ನು ಸಾಹಿತ್ಯವಾಗಿಸಿದ ಸಂಕೀರ್ಣ ಕೃತಿಗಳು ಎಂದು ವಿಭಾಗಿಸಿಕೊಳ್ಳಲಾಗಿದೆ.

ಸಾಹಿತ್ಯ ಕೃತಿಗಳಾದ ಕಾಲೇಜು ರಂಗ, ತರಂಗ, ಪ್ರಾಧ್ಯಾಪಕನ ಪೀಠದಲ್ಲಿ ಇವುಗಳೆಲ್ಲ ಪ್ರತಿಯೊಬ್ಬರಿಗೂ ಅನುಭವ ಗಮ್ಯ ವಿಚಾರಗಳು ಅಂತಹ ವಿಚಾರಗಳನ್ನು ನವಿರು ಹಾಸ್ಯದಿಂದ ನಿರೂಪಿಸಿದ ಬಗೆ ಗಮನೀಯ ಅಂಶವಾದರೆ ಅನ್ಯಜ್ಞಾನ ಶಿಸ್ತುಗಳನ್ನು ಸಸ್ಯ ವಿಜ್ಞಾನದಂತಹ ಗಹನ ವಿಚಾರಗಳನ್ನು ಸರಳ, ಸರಾಗ ಶೈಲಿಯಿಂದ ಸಾಹಿತ್ಯವಾಗಿಸಿದ ಬಗೆ ಎರಡನೇ ವಿಭಾಗದಲ್ಲಿ ಮುಖ್ಯವಾಗುತ್ತದೆ. ಹಾಗಾಗಿಯೇ ವೈಜ್ಞಾನಿಕ ಬರಹಗಳನ್ನು ವಿಜ್ಞಾನ ಸಾಹಿತ್ಯ ಎನ್ನಬಹುದಾಗಿದೆ. ವಿಜ್ಞಾನವೊಂದೇ ಅಲ್ಲ ಚಾರಿತ್ರಿಕ, ಭೌಗೋಳಿಕ, ಇತ್ಯಾದಿ ವಿಷಯಗಳನ್ನು ಸಂದರ್ಭಕ್ಕೆ ಅನುಗುಣವಾಗಿ ಪೂರಕವಾಗಿ/ಪ್ರಧಾನವಾಗಿ ಚರ್ಚಿಸಿದ ಬಗೆ ಗಮನಾರ್ಹ ಅಂಶವೆನಿಸಿದೆ. ಪ್ರತಿಕೃತಿಯೂ ಒಂದು ವಿಷಯವಷ್ಟೇ ಅಲ್ಲದೆ ಹತ್ತು ಹಲವಾರು ವಿಷಯಗಳೊಂದಿಗೆ ಸೃಜನೆಗೊಂಡಿದ್ದು ಒಂದರ್ಥದಲ್ಲಿ ವರ್ಗೀಕರಿಸಲು ಬಾರದ ಸಂಕೀರ್ಣ ಸಾಹಿತ್ಯವೆನಿಸಿದೆ.

ಡಾ. ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯಿಕ ಬರಹವು ಸೃಜನಶೀಲತೆಯಿಂದ ಕೂಡಿದ್ದು, ಅವರ ಪ್ರತಿಯೊಂದು ಕೃತಿಯು ಸೃಜನಾತ್ಮಕವಾದ ನೆಲೆಯಲ್ಲಿ ರೂಪುಗೊಂಡಿವೆ. ಸಾಹಿತ್ಯದ ರೂಪವಾಗಿ ಕಾಣುತ್ತವೆ. ಅವರ ಕೃತಿಯಲ್ಲಿ ಮೂಡಿರುವ ಸೃಜನಾತ್ಮಕವಾದ ಬರಹವು ವಿಫಲವಾಗಿದ್ದು ಸಂಕ್ಷಿಪ್ತವಾದ ಉದಾಹರಣೆಗಳೊಂದಿಗೆ ವಿವರಿಸಲಾಗಿದೆ. ಸ್ವಾಮಿಯವರ ಕೆಲ ಆಯ್ದ ಕೃತಿಗಳಿಂದ ಅವರ ಸಾಹಿತ್ಯಿಕ ಸೃಜನೆಯನ್ನು ಕಟ್ಟಿಕೊಡುವ ಪ್ರಯತ್ನ ಇದಾಗಿದೆ.

**ಸಾಹಿತ್ಯಿಕವಾದ ಕೃತಿಗಳು:**

**೧. ಅಮೇರಿಕಾದಲ್ಲಿ ನಾನು:**

ಪ್ರವಾಸಕಥನವಾಗಿ ಇದು ಸ್ವಾಮಿಯವರ ಸೃಜನಾತ್ಮಕ ಬರಹಕ್ಕೆ ಸಾಕ್ಷಿಯಾಗಿದೆ. ವಿದೇಶಕ್ಕೆ ಉನ್ನತ ವ್ಯಾಸಂಗಕ್ಕೆ ಹೋದ ವಿದ್ಯಾರ್ಥಿಯೊಬ್ಬನ ಅನುಭವ ಕಥನ ಇಲ್ಲಿ ಸ್ವಾಮಿಯವರ ಅಮೇರಿಕಾ ಮತ್ತು ಭಾರತೀಯ ಸಂಸ್ಕೃತಿಗಳ ಕಾಲನಿಕವಾದ ವಿಮರ್ಶಾತ್ಮಕವಾದ ರೀತಿಯಲ್ಲಿ ಬರೆದಿರುವುದು ಕಾಣುತ್ತದೆ. ನನ್ನ ಟೋಪಾ ಸೀರೆಯ ಕತೆಗಳು ಇದಕ್ಕೆ ಸಾಕ್ಷಿಯಾಗಿವೆ.

ಪೆಗ್ಗಿ ಎಂಬ ಅಮೇರಿಕಾದ ಮಹಿಳೆ ಸೀರೆಯನ್ನು ಧರಿಸಿದ್ದು ಸ್ವಾಮಿ ಈ ರೀತಿ ಬರೆಯುತ್ತಾರೆ. "ಅಂಚುಗಳೆರಡೂ ಸೇರುವಂತೆ ಸೀರೆಯನ್ನು ಮಡಿನ ಅದರ ಎತ್ತರವನ್ನು ಅರ್ಧ ಮಾಡಿದ್ದಾಳೆ. ನಮ್ಮ ಹೆಂಗಸರೂ ಉಡುವಂತೆಯೇ ಸೀರೆಗೆ ಹಿಡಿದು ಉಟ್ಟು ಸೆರುಗು ಹೆಚ್ಚಿಯ ಸಿರೆಗೂ ಇಳಿಬಿಟ್ಟಿದ್ದಾಳೆ."[೧]

ಪೆಗ್ಗಿ ತನ್ನ ಗಂಡ ಬೇಡನೆಂದರೂ ಭಾರತೀಯ ಸ್ತ್ರೀ ಸಂಸ್ಕೃತಿ ಪ್ರತೀಕವಾದ ಸೀರೆಯನ್ನು ಧರಿಸಿದ್ದು ಸ್ವಾಮಿಯವರು ಹೇಳುವುದು ಒಂದು ದೇಶದಲ್ಲಿನ ಇನ್ನೊಂದು ದೇಶದ ಉಡುಗೆ ತೊಡುಗೆ ಅನುಕರಿಸಲು ಹೀಗೆ ಆತುರಪಡುತ್ತಾರೆ ಎಂಬ ಅಂಶಗಳು ಉತ್ತರಿಸಿದ್ದು ಇಂತಹ ಹಲವು ಸ್ವಾರಸ್ಯಕ ಪ್ರಸಂಗದೊಂದಿಗೆ 'ಅಮೇರಿಕನ್ನರು, ನಮ್ಮಂತೆ, ನಾವೂ ಅಮೇರಿಕನ್ನರಂತೆ ಎಂದು ಸ್ವಾಮಿಯವರು ಹೇಳುವುದು ಅವರ ಸೃಜನಾತ್ಮಕ ಬರಹದ ಹಿನ್ನೆಲೆಯಾಗಿದೆ.

ಅಮೇರಿಕಾದ ಪ್ರವಾಸದಲ್ಲಿನ ಸ್ವಾಮಿಯವರ 'ವಿಚಾರ' ಅಂದರೆ 'ನಾನು' ಎಂಬ ಅರ್ಥದಲ್ಲಿ 'ಅಮೇರಿಕಾದಲ್ಲಿ ನಾನು' ಎಂಬ ಶೀರ್ಷಿಕೆ ಮೂಡಿದೆ. ಕಾದಂಬರಿಯ ರೂಪದಲ್ಲಿ ಹಾಸ್ಯದೊಂದಿಗೆ ಮಾರ್ಮಿಕವಾಗಿ ಪ್ರಾರಂಭದಿಂದ ಕೊನೆಯವರಿಗೂ ಆಸಕ್ತಿ ಕೆರಳಿಸುತ್ತದೆ. ಪ್ರತಿ ಪಾತ್ರಗಳು ವಿಶಿಷ್ಟತೆಯಿಂದ ಸ್ವಾಮಿಯವರು ಚಿತ್ರಿಸಿರುವರು. ಕೃತಿಯ ಸಂದರ್ಭಕ್ಕೆ ತಕ್ಕಂತೆ ವ್ಯಂಗ್ಯಚಿತ್ರಗಳ ಬಳಕೆಯು ಇವರ ಕೃತಿಯನ್ನು ಸೃಜನಾತ್ಮಕ ನೆಲೆಗಟ್ಟಿಗೆ ತಂದು ನಿಲ್ಲಿಸಿದೆ.

**ಕಾಲೇಜು ತರಂಗ:**

ಕಾಲೇಜು ತರಂಗ ಕೃತಿಯು ಶೈಕ್ಷಣಿಕ ಆಡಳಿತ ಲೋಪದೋಷಗಳು ಎತ್ತಿ ತೋರಿಸುತ್ತದೆ. ಸ್ವಾಮಿಯವರು ತಮ್ಮದೇ ಆದ ತಿಳಿ ಹಾಸ್ಯ ಶೈಲಿಯಲ್ಲಿ ವ್ಯಂಗ್ಯ ಭರಿತವಾದ ಸಂಭಾಷಣೆಯ ರೂಪದಲ್ಲಿ ಪಾತ್ರ ಮತ್ತು ವಿಷಯ ಚಿತ್ರಣವು ಸೊಗಸಾಗಿ ನಿರೂಪಿಸಿದ್ದು ಇಲ್ಲಿ ಕಾಣುತ್ತೇವೆ.

"ಎಂ.ಎ. ತರಗತಿಯ ಮೊದಲನೆಯ ಪರೀಕ್ಷೆಯಲ್ಲಿ ತಂಗವೇಲುಗಳಿಸಿದ ಶೇ. ಅಂಕಗಳು ಹೀಗಿದೆ.

ಪೂರ್ವಚರಿತ್ರೆ ೧೫

ಮಧ್ಯಕಾಲ ೧.೦

ಆಧುನಿಕ ಕಾಲ ೧.೫

ಯುರೋಪಿನ ಚರಿತ್ರೆ ೦.೦

ಭಾರತೀಯ ಸಾಂಸ್ಕೃತಿಕ ಚರಿತ್ರೆ ೦.೦"[೨]

ತಂಗವೇಲು ಎಂಬ ಎಂ.ಎ. ವಿದ್ಯಾರ್ಥಿಯ ಅಂಕಗಳನ್ನು ಸ್ವಾಮಿಯವರು ನೈಜವಾಗಿ ಬರೆದಿರುವರೋ ಇಲ್ಲಿಯೋ ಆದರೆ ಕಥೆ ರೂಪದ ಬರಹಕ್ಕೆ ಹಾಸ್ಯ ತಂದರು. ಅದು ಶಿಕ್ಷಣ ವ್ಯವಸ್ಥೆಯ ನೈಜ ಚಿತ್ರಣದ ರೂಪದಂತೆ ಇದೆ.

**ಕಾಲೇಜುರಂಗ**

ಕಾಲೇಜು ರಂಗ ಕೃತಿಯು ಡಾ. ಬಿ.ಜಿ.ಎಲ್. ಸ್ವಾಮಿಯವರ ಬರಹದ ವೈವಿಧ್ಯತೆಯನ್ನು ತೋರಿಸುತ್ತದೆ. ಅವರ ಹಾಸ್ಯ ವ್ಯಂಗ್ಯದೊಂದಿಗೆ ಗಂಭೀರ ವಿಚಾರಗಳನ್ನು ಚರ್ಚಿಸುವ ಬಗ್ಗೆ ಹಾಗೂ ಶೈಕ್ಷಣಿಕ ಆಡಳಿತವು ಸೊರಗುತ್ತಿರುವುದರ ಬಗ್ಗೆ ಅವರಿಗಿದ್ದ ಕಾಳಜಿಯನ್ನು ಅವರು ತಮ್ಮ ಬರಹದ ಮೂಲಕ ಈ ಕೃತಿಯಲ್ಲಿ ಹೊರಹಾಕಿದ್ದು ಕಾಣಬಹುದು.

ಕಾದಂಬರಿ, ನಾಟಕ, ರೂಪದಲ್ಲಿ ನಡೆಯುವ ಸಂಭಾಷಣೆಯೊಳಗೆ ಘನ ಗಾಂಬೀರ್ಯ ವಿಚಾರಶೀಲ ಚರ್ಚಿಸುವ ಇವರ ಬಗ್ಗೆ ಅಪೂರ್ವವಾದದ್ದು ಅಂತಹ ಅನೇಕ ಉದಾಹರಣೆಗಳು ಕಾಲೇಜು ರಂಗದಲ್ಲಿವೆ. ವಾಸ್ತವಿಕತೆಯನ್ನು ಬಿಂಬಿಸುವ ಈ ಬರಹ ಹೀಗಿದೆ.

"ಅಜ್ಞಾತವಾಗಿದ್ದ ಹಳ್ಳಿಯೊಂದರಲ್ಲಿ ಹುಟ್ಟಿ ಅನಕ್ಷರಸ್ಥನಾಗಿ ಬೆಳೆದು ಪುಂಡ ಮುಖಂಡನಾಗಿ ಮರೆದು ಆ ಪ್ರದೇಶದಿಂದ ಉಮೇದುವಾರನಾಗಿ ನಿಂತು ಚುನಾಯಿತನಾದೊಬ್ಬ ಎಂ.ಎಲ್.ಎ.ಗೆ ವಿದ್ಯಾಭ್ಯಾಸದ ವಿಷಯದಲ್ಲಿ ವಿಪರೀತ ಶೃದ್ಧೆ ಉದಯಿಸಿಬಿಟ್ಟಿತು. ಆ ಹಳ್ಳಿಯಲ್ಲಾಗಲಿ ಅದರ ಸುತ್ತಮುತ್ತಾ ಅಸೆಂಬ್ಲಿಯಲ್ಲಿ ಇವನು ಮಂಡಿಸಿ ತನ್ನ ಹಳ್ಳಿಯಲ್ಲಿ ಕಾಲೇಜನ್ನು ತೆರೆಯಬೇಕೆಂದು ತಗಾದೆ ಆರಂಭಿಸಿದ ಜನರನ್ನೂ ತನ್ನ ಕೋಮಿನ ಪುಂಡರನ್ನೂ ಹುರಿದುಂಬಿಸಿದ. ಮೆರವಣಿಗೆಗಳನ್ನು ಏರ್ಪಡಿಸಿದ. ತನ್ನ ಊರಿನಲ್ಲಿ ಕಾಲೇಜು ಅತ್ಯವಶ್ಯಕವೆಂದು ಆರ್ಭಟಿಸಿದ. ಸಂಬಂಧಪಟ್ಟ ಅಧಿಕಾರಿಗಳನ್ನೂ ಪಾರ್ಟಿಯವರನ್ನೂ 'ಹೇಗು' ಮಾಡಿ ತನ್ನ ಕಡೆಗೆ ಸೇರಿಸಿಕೊಂಡು ಕಾಲೇಜೊಂದು ಆರಂಭವಾಯಿತು."[೩]

ರಾಜಕಾರಣದ ವಾಸ್ತವಿಕತೆಯನ್ನು ಶಿಕ್ಷಣದ ಅಧೋಗತಿಯನ್ನು ಇಲ್ಲಿ ಸ್ವಾಮಿಯವರು ಚಿತ್ರಿಸಿದ್ದು ವಾಸ್ತವ ಅಂಶಗಳು ತಮ್ಮದೇ ಆದ ದಾಟಿಯಲ್ಲಿ ನೇರವಾಗಿ ಬರೆಯುವ ಅವರ ಸ್ವಭಾವ ಅವರ ಸೃಜನಾತ್ಮಕವಾದ ನೆಲೆಗೆ ಕಾರಣವಾಗಿದೆ.

**ತಮಿಳು ತಲೆಗಳ ನಡುವೆ**

ಸ್ವಾಮಿಯವರ ವಿಶಿಷ್ಟ ಸೃಜನಶೀಲ ಬರಹದಲ್ಲಿ ತಮಿಳು ತಲೆಗಳ ನಡುವೆ ಕೃತಿಯು ಒಂದು. ಈ ಕೃತಿಯಲ್ಲಿ ಭಾಷಾಶಾಸ್ತ್ರ ಹಾಗೂ ಹಾಸ್ಯದ ರುಚಿಯನ್ನು ತೋರಿಸಿರುವರು. ತಮಿಳು ತಲೆಗಳ ನಡುವೆ ಎಂಬ ತಲೆ ಬರಹವು ತಮಿಳುನಾಡಿನಲ್ಲಿ ಸ್ವಾಮಿಯವರು ತಮಿಳು ವಿದ್ವಾಂಸರೊಂದಿಗೆ ಮಾಡಿದ ಸಂಶೋಧನ ರೂಪವೇ ಈ 'ತಮಿಳ ತಲೆಗಳ ನಡುವೆ.'

ಈ ಕೃತಿಯಲ್ಲಿ ಸ್ವಾಮಿಯವರ ವಿಶಿಷ್ಟವಾದ ಬರಹವನ್ನು ಕಾಣುತ್ತೇವೆ.

"ನಿಮ್ಮ ಅಧ್ಯಯನದ ವಿಷಯ? 'ಚಂಗಕಾಲದ ಹುಡುಗರು'.

'ಇದೆ ತೆರನಾದ ವಿಷಯವನ್ನು ನಿಮ್ಮ ಡಿಪಾರ್ಟ್‌ಮೆಂಟಿನಲ್ಲೇ ಬೇರೆ ಯಾರೋ ಆರಿಸಿಕೊಂಡು ಹಾಗಿದೆಯಲ್ಲವೆ?

'ಅದು ಚಂಗ ಕಾಲದ ಹುಡುಗಿಯರು. ಇನ್ನೊಬ್ಬರು ಚಂಗಕಾಲದ ಮಕ್ಕಳು'

'ಏನ್ರೀ ಇದು ಹುಡುಗಿಯರೂ ಹುಡಗರೂ ಮಕ್ಕಳೇ ಅಲ್ಲವೇನ್ರಿ'?"[೪]

ಚಂಗಕಾಲದ ಕುರಿತು ಸಂಶೋಧನೆಗಳ ಸ್ಥಿತಿಯನ್ನು ತೋರಿಸುತ್ತದೆ. ಸ್ವಾಮಿಯವರು ಗಂಭೀರವಾದ ಚರ್ಚೆಗಳನ್ನು ತಿಳಿ ಹಾಸ್ಯದ ಮೂಲಕ ಈ ಕೃತಿಯಲ್ಲಿ ನೀಡಿದ್ದು ಕಂಡುಬರುತ್ತದೆ.

**ಪಂಚಕಲಶ ಗೋಪುರ**

ಪಂಚಕಲಶ ಗೋಪುರದಲ್ಲಿ ಬಿ.ಜಿ.ಎಲ್. ಸ್ವಾಮಿಯವರು ತಮಗೆ ಸೆಂಟ್ರಲ್ ಕಾಲೇಜಿನಲ್ಲಿ ಕಾಲೇಜಿನಲ್ಲಿ ಗುರುಗಳಾಗಿದ್ದ ಐವರು ಮಹನೀಯರನ್ನು ಕುರಿತು ರಚಿಸಿರುವ ವ್ಯಕ್ತಿಚಿತ್ರಗಳಿವೆ. ಆ ಐವರು ಮಹನೀಯರೆಂದರೆ ಬೆಳ್ಳಾವೆ ವೆಂಕಟನಾರಾಯಣಪ್ಪನವರು, ಟಿ.ಎಸ್.ವೆಂಕಣ್ಣಯ್ಯನವರು, ಬಿ.ಎಂ.ಶ್ರೀಕಂಠಯ್ಯನವರು, ಎ.ಆರ್.ಕೃಷ್ಣಶಾಸ್ತ್ರೀಗಳು ಹಾಗೂ ವಿ. ಸೀತಾರಾಮಯ್ಯನವರು.

ಪಂಚಕಲಶ ಗೋಪುರ ಎಂಬ ಶೀರ್ಷಿಕೆಯಲ್ಲಿಯೇ ಒಂದು ಬಗೆಯ ವೈಶಿಷ್ಟ್ಯ ಎದ್ದು ಕಾಣುತ್ತದೆ. ಸ್ವಾಮಿಯವರು ಕರ್ನಾಟಕ ಸಂಘವನ್ನು ಗುಡಿಗೂ ಐವರು ಮಹನೀಯರನ್ನು ಆ ಗುಡಿಯ ವೈಭವವನ್ನು ಸಾರುವ ಕಲಶಗಳಿಗೂ ಹೋಲಿಸಿದ್ದಾರೆ. ಇಲ್ಲಿನ ಶಬ್ಧ ಚಿತ್ರಗಳು ಬೇರೆ ಲೇಖಕರ ವ್ಯಕ್ತಿ ಚಿತ್ರಗಳಿಗಿಂತ ಭಿನ್ನವಾಗಿ ಕಾಣುವುದು ಸ್ವಾಮಿಯವರ ಬರವಣಿಗೆಯ ಶೈಲಿಯಿಂದ. ಸ್ವಾಮಿಯವರು ಈ ಕೃತಿಯಲ್ಲಿ ಮೂಡಿಸಿರುವ ಸೆಂಟ್ರಲ್ ಕಾಲೇಜಿನ ವೈಭವ ಇಂಥ ಲೇಖನಗಳಿಂದ ಹಸಿರಾಗಿ ಉಳಿದಿವೆ.

ಪಂಚಕಲಶ ಗೋಪುರ ಸ್ವಾಮಿಯವರ ಕಲ್ಪನೆಯ ಕೃತಿಯಲ್ಲ. ವಾಸ್ತವವಾಗಿ ನಡೆದ ಘಟನೆಗಳನ್ನು ಸ್ವಾರಸ್ಯವಾಗಿ ನಿರೂಪಿಸಿರುವ ಯಥಾರ್ಥ ಕೃತಿ. ಹಿಂದೆಯೇ ತಿಳಿಸಿರುವಂತೆ ಸ್ವಾಮಿಯವರು ಕರ್ನಾಟಕ ಸಂಘದ ಕಾರ್ಯದರ್ಶಿಗಳಾಗಿದ್ದ ಸಂದರ್ಭದಲ್ಲಿ ಅನೇಕ ಕಾರ್ಯಗಳನ್ನು ನಡೆಸಿದರು. ಇಲ್ಲಿ ಚಿತ್ರಿತವಾಗಿರುವ ಐವರು ಮಹನೀಯವರೂ ಕರ್ನಾಟಕ ಸಂಘದ ಅಧ್ಯಕ್ಷರಾಗಿ ಉಪಾಧ್ಯಕ್ಷರಾಗಿ ಸಂಘವನ್ನು ಮುನ್ನೆಡಿಸಿದ ಬಗೆಯನ್ನು ಅವರು ನಿಸ್ಪೃಹ ಸೇವೆಯನ್ನು ಸ್ವಾಮಿಯವರು ಸುಂದರವಾಗಿ ಚಿತ್ರಿಸಿದ್ದಾರೆ.

"ಪದ್ಯಕ್ಕೂ ನನಗೂ ಸಹೃದಯತೆಯ ನಂಟು ಅಷ್ಟಾಗಿ ಬೆಳೆದು ಬಂದಿಲ್ಲ. ಮೊದಮೊದಲಂತೂ ಪದ್ಯ ಪದ್ಯವಾಗಿಯೇ ಇತ್ತು. ನನ್ನ ಈ 'ಅಸಂಸ್ಕೃತ' ಅಭಿಪ್ರಾಯವನ್ನು ಕೆಲವು ಕಡೆ ಬಾಯಿಬಿಟ್ಟು ಹೇಳಿ ಕವಿಗಳ ಶೈಲಿ ಛೀಮಾರಿ ಹಾಕಿಸಿಕೊಂಡಿದ್ದೇನೆ. ವಿ.ಸೀ. ಅವರ ಬಾಯಲ್ಲಿ 'ಛೀ' ಎಂದು ಬರಲಿಲ್ಲಿ. 'ಏನಪ್ಪ ಸ್ವಾಮಿ, ನಮ್ಮ ಬುಡಕ್ಕೆ ತಂದುಬಿಟ್ಟೆಯಲ್ಲಾ!' Poetry is the highest form of art ಚಿತ್ರ ಬರೀತಿನಿ, ನಾಟಕ ಆಡತೀಯೆ, ಪಿಟೀಲು ನುಡಿಸುತ್ತೀಯೆ, ಪದ್ಯ ಬೇಡ ಅಂತಿಯೇ! 'ಇಲ್ಲ ಸರ್ ಅದೇನೋ ನನಗೆ ಹಿಡಿಸಲಿಲ್ಲ. ಬಹುಶಃ ಪದ್ಯದಲ್ಲಿ ಏನನ್ನು ದೃಷ್ಟಿಸಬೇಕೆಂಬುದು ನನಗೆ ಗೊತ್ತಾಗಿಲ್ಲ' ಎಂದೆ. ಅಂದಿನಿನಿಂದ ಆಗಾಗ ಅವರ ಪದ್ಯವಾಚನ, ವ್ಯಾಖ್ಯಾನ ಕೇಳುವ ಸಂದರ್ಭ ದೊರೆತಿತ್ತು."[೫]

ಇಂತಹ ಅನೇಕ ಘಟನೆಗಳು ವಾಸ್ತವಿಕವಾಗಿ ಕೃತಿಯಲ್ಲಿ ಸ್ವಾಮಿಯವರು ಬರೆದಿರುವಲ್ಲಿ ಅವರ ಸೃಜನಶೀಲ ಕಥೆಯನ್ನು ಕಾಣಬಹುದು. ವಿ.ಸೀ.ಯಂತಹ ಮಹನೀಯ ಸಾಹಿತಿಯೊಂದಿಗೆ ಬೆರೆತ ಕ್ಷಣಗಳು ನೇರವಾಗಿ ಬರೆದಿದ್ದು ಇದು ಅವರ ಸೃಜನಶೀಲತೆಯನ್ನು ತೋರಿಸುತ್ತದೆ.

**ಮೈಸೂರು ಡೈರಿ:**

'ಮೈಸೂರು ಡೈರಿ'ಯು ಸ್ವಾಮಿಯವರು ಮೈಸೂರಿನಲ್ಲಿ ಕಳೆದ ದಿನಗಳ ಅನುಭವವನ್ನು ಉತ್ತರಿಸಿದ್ದು ಲವಲವಿಕೆಯಿಂದ ಕೂಡಿದ ಬರಹವಾಗಿದೆ. ಆರಂಭದ ಅಧ್ಯಾಯದಲ್ಲಿ ಮಾನಸಗಂಗೋತ್ರಿಯ ವರ್ಣನೆಯು ಮೂಡಿದ್ದು ಅವರ ಬರಹದ ಸೃಜನಾತ್ಮಕತೆಗೆ ಹಿಡಿದ ಕನ್ನಡಿಯಾಗಿದೆ. ಕ್ಯಾಪಸನಲಂತೂ ಮನುಷ್ಯ ವರ್ಗವೊಂದನ್ನುಳಿದು ಜಡ ಜಗತ್ತೆಲ್ಲ ಚೈತನ್ಯಮಯವಾಗುತ್ತದೆ ಎಂಬ ಅವರ ವ್ಯಂಗದ ಮಾತು ಅವರ ಬರಹದ ಚಹರೆಯನ್ನು ತೋರಿಸುತ್ತದೆ.

ಕುವೆಂಪು ಅವರ ನಂತರ ಮಾನಸಗಂಗೋತ್ರಿಯ ಪರ್ಯಾಯದ ವರ್ಣನೆ ಮಾಡಿದ್ದು ಸ್ವಾಮಿಯವರ ಸೃಜನಾತ್ಮಕ ಬರಹಕ್ಕೆ ಸಾಕ್ಷಿಯಾಗಿದೆ.

"ಪುಷ್ಯ ಮಾಘಗಳ ತಣಿವು ಹೆಪ್ಪುಗಟ್ಟಿದ್ದು; ತೇವವಿಲ್ಲದ ಚಳಿ ಮೈಸೂರನಲ್ಲಿ ಹಕ್ಕಿಗಳು, ಮರಗಿಡಗಳ ಹಾಗೂ ವಾತಾವರಣದ ವರ್ಣನೆಯೊಂದಿಗೆ ನಮ್ಮ ಜನರು ಎಷ್ಟೂ ಸೋಮಾರಿಗಳು ಎಂಬುದು, ಬೆಳಿಗ್ಗೆ ಏಳೂವರೆಯಾದರೂ ಮಲಗಿರುತ್ತಾರೆ"[೬] ಎಂದು ಸ್ವಾಮಿಯವರು ಮಾರ್ಮಿಕವಾಗಿ ಬರೆಯುವುದು ಅವರ ಸೃಜನಶೀಲ ಬರಹದ ಕಲೆಯಾಗಿದೆ.

**ಪ್ರಾಧ್ಯಾಪಕನ ಪೀಠದಲ್ಲಿ**

ಪ್ರಾಧ್ಯಾಪಕನ ಪೀಠದಲ್ಲಿ ಕೃತಿಯು ಸ್ವಾಮಿಯವರ ಪ್ರೆಸಿಡೆನ್ಸ್ ಕಾಲೇಜಿನ ಆಡಳಿತ ಅನುಭವವನ್ನು ಸೊಗಸಾಗಿ ಇಲ್ಲಿ ಚಿತ್ರಿಸಿರುವುದು ಹಾಸ್ಯರಸವೇ ಪ್ರಧಾನವಾಗಿ ಇಲ್ಲಿ ತಮಿಳು ವಿದ್ಯಾರ್ಥಿಗಳು ಕನ್ನಡ ಭಾಷೆ ಉಚ್ಚರಿಸುವ ಬಗೆ ಹಾಗೂ ಇತರರ ತಮ್ಮ ಸಿಬ್ಬಂದಿ, ಅಧಿಕಾರಿಗಳು ಹೇಳುವ ಮಾತುಗಳು ತಮಿಳು–ಕನ್ನಡ ರೂಪದಲ್ಲಿ ಹಾಸ್ಯಮಯವಾಗಿ ಬರೆಯುವುದು ಸ್ವಾಮಿಯವರ ಸೃಜನತೆಗೆ ಹಿಡಿದ ಕನ್ನಡಿಯಾಗಿದೆ.

ಕನ್ನಡ ಸಾಹಿತ್ಯದ ಬಗ್ಗೆ ಪ್ರಶ್ನೆಗಳು ಕೇಳಿದಾಗ ಅವರ ವಿದ್ಯಾರ್ಥಿಗಳು ವಿವರಿಸಿದ ಬಗೆ ಹೀಗಿದೆ.

"ಪ್ರಶ್ನೆ: ವಿಕ್ರಮಾರ್ಜುನ ವಿಜಯದ ಕಥಾನಾಯಕನು ಯಾರು?

ಉತ್ತರ : ಪಂಬಾ

ಪ್ರಶ್ನೆ : ಆಧುನಿಕ ಸಾಹಿತ್ಯದ ನಾಲ್ಕು ಕವಿಗಳ ಹೆಸರುಗಳನ್ನು ಬರೆಯಿರಿ; ಅವರ ಕೃತಿಗಳನ್ನು ಕುರಿತು ಒಂದೆರಡು ವಾಕ್ಯಗಳಲ್ಲಿ ಸಂಗ್ರಹಿಸಿ.

ಯಂಕಟಾಚಯ್ಯಂಕಾರ್ : ಇವರೂ ಮಳ ತೊಟ್ಟವರ್. ಕತೆ ಪರೀತಾರಾ. ನಾಟಕ್ ಪರೀತಾರಾ.

ಪೇಯಾಂತರೇ – ತಾರವಾಟತೋರು, ಮಳ ಪುತ್ತಿವಂತರು. ನಾಟ್ಕಾ ಆಡ್ತಾರಾ. ಪದಾ ಏಳ್ತಾರಯ್ಯರ್.

ಕೋಯಿಂತಾಪಯ್ಯಾ – ತೊಟ್ಟ ಮುದೂಕ್ರು ಮೀಶೆ ಇಟ್ಕೋತಾರಾ. ಮಳ ಮೇತಾವಿ. ಗದ್ದಿಯ, ಪದ್ದಿಯ, ಉರುದ್ದಿಯ ಎಲ್ಲಾ ಪರೀತಾರಾ ಮಂಕಳೂರಿನಲ್ಲಿ ಇತ್ತಾರಾ.

ಪ್ರಶ್ನೆ: ಗದಾಯುದ್ಧದ ಕತೆಗಳನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

ಉತ್ತರ : "ಒಂದು ಊರಿನಾಕೆ ಒಬ್ಬ ಇರಾಶಾ ಇದ್ದಾ. ಅವನ ಎಚರುಪೀಮ. ಅವನ್ ಮಳ ತೆಯಿರಿಯಬಂತಾ. ಅವನ್ ತುರೋತ್‌ನಿಗೆ ಕಾಲ್ ಕೆರೆದ. ಯುತ್ತ ಮಾಡ್ತಾ. ಇವನ್ ಅವ್‌ನೂ ಗದೆ ಪಿಟಿತುಕೊಂಡ್ ಶಂಡೈ ಮಾಡಿದ್‌ರು. ಈ ಮೇಲಕ್ಕೆ ಮರತ್ ಓಯ್ತು."[೬]

ವಿದ್ಯಾರ್ಥಿಗಳು ಕನ್ನಡವನ್ನು ಯಾವ ರೀತಿ ಬರೆದಿದ್ದರು ಎಂಬುದನ್ನು ಸ್ವಾಮಿಯವರು

ಚಿತ್ರಿಸಿದ್ದು ಕನ್ನಡ ಓದುಗರಿಗೆ ಹಾಸ್ಯ ಉಕ್ಕಿಸುತ್ತದೆ. ಅವರ ಬರವಣಿಗೆಯು ಗಂಭೀರವಾದ ವಿಷಯವನ್ನು ಹಾಸ್ಯರೂಪದಲ್ಲಿ ನೀಡುವುದು.

ವಿದ್ಯಾರ್ಥಿಗಳ ಕಲಿಕೆಯ ಮಟ್ಟ ಹಾಗೂ ಅವರು ಅರ್ಥಮಾಡಿಕೊಂಡ ಬಗೆಯನ್ನು ಸೃಜನಾತ್ಮಕವಾಗಿ ಚಿತ್ರಿಸಿದ್ದು ಸ್ವಾಮಿಯವರ ಬರಹದಲ್ಲಿ ಕಾಣಬಹುದು. ಇಂತಹ ಹಲವು ಪ್ರಸಂಗಗಳು ಸ್ವಾಮಿಯವರು ಈ ಕೃತಿಯಲ್ಲಿ ನೀಡಿರುವುದು ಕಾಣುತ್ತದೆ.

**ವಿಜ್ಞಾನ ಸಾಹಿತ್ಯದ ಕೃತಿಗಳು:**

**ಹಸಿರುಹೊನ್ನು**

ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಈ ಕೃತಿಯು ಸ್ವಾಮಿಯವರ ಸೃಜನಾತ್ಮಕ ಬರಹಕ್ಕೆ ನೀಡಿದ ಕನ್ನಡಿಯಾಗಿದೆ. ಪ್ರವಾಸ ಕಥನ ರೂಪದಲ್ಲಿ ಮೂಡಿಬರುವ ಈ ಕೃತಿಯು ಹಸಿರು ಪ್ರಪಂಚದ ಒಳನೋಟಗಳೊಂದಿಗೆ ನವರಸಗಳ ಬಳಕೆಯಿಂದ ಕೂಡಿದ್ದು. ಈ ಕೃತಿಯು ನಾಲ್ಕು ಭಾಗಗಳಲ್ಲಿ ಮೈದಾಳಿದೆ. ಮೊದಲನೆಯದರಲ್ಲಿ ಮಾತನ್ನು ಮೂದಲಿಸುವ ಮಹಾರಣ್ಯ ಸರಣಿ–ಕಾಡುಗಳ ವೀಕ್ಷಣೆ, ಎರಡನೆಯದರಲ್ಲಿ ಮರಕತೆಮಯ ಸಿಂಗಾರದಲ್ಲಿ ಮೆರೆಯುವ ಕೇರಳದ ತೇಕ್ಕಡಿ ಕಾಡುಗಳಿಗೆ ಭೇಟಿ; ಮೂರನೆಯದರಲ್ಲಿ ಪ್ರಕೃತಿಯ ನರ್ತನ ರಂಗವೇ ಆಗಿರುವ ಆಗುಂಬೆಯ ಅರಣ್ಯದರ್ಶನ ಕೊನೆಯದರಲ್ಲಿ ಪಸುರ್ ಕಡಲ್‌ನಲ್ಲಿ ಕನ್ಯಾಕುಮಾರಿ ಹಾಗೂ ಕೇರಳದ ಕಡಲ ತೀರದ ಕಾಡುಗಳ ಅಧ್ಯಯನ, ನಾಲ್ಕು ಭಾಗವು ವಿಶಿಷ್ಟತೆಯಿಂದ ಕೂಡಿದ್ದು ವೈವಿಧ್ಯಮಯವಾದ ಬರವಣಿಗೆಯಾಗಿದೆ.

ಹಸಿರು ಹೊನ್ನು ಕೃತಿಯಲ್ಲಿ ಸ್ವಾಮಿಯವರು ಕಾವ್ಯ, ಪುರಾಣ, ಇತಿಹಾಸ ಶಾಸನ, ಬೇರೆ–ಬೇರೆ ಭಾಷೆಯ ಕಾವ್ಯಗಳು ಪುರಾಣಗಳ ಉಕ್ತಿಯನ್ನು ಬಳಸಿಕೊಂಡಿದ್ದು ಕಾಣಬಹುದು. ಅವರು ಬಳಸಿಕೊಂಡ ಆಕರಗಳೆಂದರೆ, ಸೌಂದರಾನಂದ ಕಾವ್ಯ, ಕರ್ನಾಟಕ ಕಾದಂಬರಿ, ವಿಕ್ರಮಾರ್ಜುನ ವಿಜಯ ಕಾವ್ಯಾವಲೋಕನ, ಕೌಟಿಲ್ಯನ ಅರ್ಥಶಾಸ್ತ್ರ, ಶಾಂತಿಪುರಾಣ, ಗೀತೆಗೋವಿಂದ, ಭಗವದ್ಗೀತೆ, ಅದ್ಭುತ ರಾಮಾಯಣ ತೈತ್ತರಿಯ ಸಂಹಿತೆ. ವಿನಯ ಪೀಟ ತಾಳಗುಂದ ಶಾಸನ, ಕಾವ್ಯಪ್ರಕಾಶ, ವಿಷ್ಣುಪುರಾಣ, ವಾಜಸೀಮೆಯ ಸಂಹಿತೆ, ಶಿಲಪ್ಪಿದಿಕಾರಂ ಮಧುರೈಕ್ಕಂಜಿ ಮುಂತಾದ.... ಸಾಹಿತ್ಯ, ವಿಜ್ಞಾನ, ಇತಿಹಾಸ, ಭೌಗೋಳಿಕ ಧಾರ್ಮಿಕತೆಯನ್ನು ಏಕೀಭವಿಸುವ ಇವರ ಬರಹವು ಸೃಜನಾತ್ಮಕ ನೆಲೆಯಿಂದ ಕೂಡಿದೆ.

**ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ**

ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ ಕೃತಿಯು ಗಡ್ಡೆಗೆಣಸು, ಹಣ್ಣುಹಂಪಲಗಳು

ವಿದೇಶದಿಂದ ಭಾರತಕ್ಕೆ ಬಂದು ನಮ್ಮ ಅಡುಗೆ ಮನೆಯಿಂದ ನಮ್ಮ ಹೊಟ್ಟೆಗೆ ಹೇಗೆ ವಗ್ಗಿವೆ ಎಂಬ ಚಾರಿತ್ರಿಕವಾದ ವೈಜ್ಞಾನಿಕವಾದ ಬರಹವಾಗಿದೆ. ಇಲ್ಲಿ ಸ್ವಾಮಿಯವರು ಚರಿತ್ರೆ ಹಾಗೂ ಸಸ್ಯಶಾಸ್ತ್ರದ ಏಕೀಭವನ ಸಾಹಿತ್ಯದ ನೆಲೆಯಲ್ಲಿ ಕಂಡುಕೊಂಡಿದ್ದಾರೆ.

"೧೭-೧೮ನೇ ಶತಮಾನಗಳ ಭಾರತದಲ್ಲಿ ಹುರುಳಿಕಾಯಿ ಕೃಷಿಯನ್ನು ಮೊಟ್ಟಮೊದಲಿಗೆ ಆರಂಭಿಸಿದರು. ಫ್ರೆಂಚರು ಅದರ ಹಡುವಿಕೆಗೆ ಕಾಣುವಾದರೂ ಅವರೇ ತದರ್ಥವಾಗಿ ಈ ತರಕಾರಿಗೆ ಫ್ರೆಂಚ್ ಬೀನ್ಸ್ ಎಂದೆ."[೮]

ಹೀಗೆ ಸ್ವಾಮಿಯವರು ಹುರುಳಿಕಾಯಿಯ ಮೂಲವಾಗಿ ಬೆಳೆದವರಾದ ಫ್ರೆಂಚರು ಎಂದು ಇತಿಹಾಸದ ಹುಡುಕುವಿಕೆಯ ಇವರ ಇಂತಹ ಅನೇಕ ಉದಾಹರಣೆಗಳು ಸೃಜನೆಗೆ ಕಾರಣವಾಗಿವೆ.

**ಫಲಶ್ರುತಿ:**

ಫಲಶ್ರುತಿಯು ಕೂಡ ಸ್ವಾಮಿಯವರ ಸೃಜನಾತ್ಮಕ ಬರಹಕ್ಕೆ ಸಾಕ್ಷಿಯಾಗಿರುವ ಕೃತಿ. ಇಲ್ಲಿಯೋ ಸ್ವಾಮಿಯವರು ಇತಿಹಾಸ-ಭೂಗೋಳ ಮತ್ತು ಸಾಹಿತ್ಯ ಸಮ್ಮಿಲನ ಸಸ್ಯಶಾಸ್ತ್ರದ ವಿವರಣೆ ನೀಡಿದ್ದು ಕಾಣುತ್ತದೆ.

ಕೃತಿಯ ಆರಂಭದಲ್ಲಿ ಭಾರತದ ಐತಿಹಾಸಿಕ ಹಿನ್ನೆಲೆಯಿಂದ ಪ್ರಾರಂಭಿಸುತ್ತಾರೆ. "ಭಾರತಕ್ಕೂ ಮಲೇಷಿಯಾಕ್ಕೂ ೨೦೦೦ ವರ್ಷದ ಸಂಬಂಧವಿದೆಯೆಂಬುದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಅಶೋಕನ ಕಾಲದಲ್ಲಿ ಬೌದ್ಧ ಭಿಕ್ಷಾಟನೆ ಮತ ಪ್ರಚಾರ ಕಾರ್ಯಕ್ಕಾಗಿ ದಕ್ಷಿಣಾದಿ ಪ್ರದೇಶಗಳಿಗೆ ಪಲಾಯನ ಮಾಡಿದರಷ್ಟೇ. ಸಿಂಹಳದಲ್ಲಿ ಸಮಯ ಪ್ರತಿ ಶ್ರೇಷ್ಠ ಮಾಡಿ ಅಲ್ಲಿಂದ ಸುವರ್ಣ ದ್ವೀಪ (ಸುಮಾತ್ರ ಭಾಗ)ಕ್ಕೂ ಹೋದರು. ಕ್ರಿ.ಶ. ೨-೩ನೇ ಶತಮಾನಗಳಲ್ಲಿ ಸ್ಥವೀರವಾದ ಬೌದ್ಧಮತ ಕೃಷ್ಣಾನದಿಯು ತೀರದಲ್ಲಿ ಅಮರಾವತಿಯಲ್ಲಿ ಆರಂಭವಾಗಿ ಸಿಂಹಳ, ಮಧ್ಯ ಸಿಯಾನ್ ದೇಶಗಳಿಗೆ ವಲಸೆಹೋಯಿತು."[೯]

ಅಶೋಕನ ಕಾಲದ ಬೌದ್ಧಭಿಕ್ಷುಗಳ ಪ್ರಯಾಣ ಮಾಡಿದ ವಿವರಣೆ ಹಾಗೂ ಬೌದ್ಧವಂತ ಕ್ರಿ.ಶ. ೨-೩ನೇ ಶತಮಾನದಲ್ಲಿ ಹರಡಿಕೊಂಡಿರುವ ದೇಶಗಳ ಕುರಿತು ಒಂದು ಸಸ್ಯಶಾಸ್ತ್ರದ ಕೃತಿಗೆ ಧಾರ್ಮಿಕ ಅಂಶಗಳೊಂದಿಗೆ ಹೇಳುತ್ತಾ ಸಾಗುವ ಇವರ ಬರಹ ಅದ್ಭುತವಾಗಿದೆ.

**ದೌರ್ಗಂಧಿಕಾಪಹರಣ**

ಸಸ್ಯಶಾಸ್ತ್ರದ ನೆಲೆ ಸಾಹಿತ್ಯದಿ ಸ್ಪರ್ಶವನ್ನು ನೀಡಿ ನಾಟಕೀಯವಾದ ಸಂಭಾಷಣೆಯನ್ನು

ಬೆರೆಸಿ ಬರೆದ ಈ ಕೃತಿಯು ಸೃಜನಾತ್ಮಕವಾಗಿದೆ. ಮಹಾಭಾರತದ ಪಾತ್ರಗಳಂತೆ ಇಲ್ಲಿ ಚಿತ್ರ ನೀಡುತ್ತಾ ವಿಜ್ಞಾನದ ವಿಷಯಗಳು ಸಾಮಾನ್ಯರಿಗೆ ಅರ್ಥವಾಗುವ ರೀತಿಯ ಬರೆದಿದ್ದು ಕಾಣಬಹುದು.

"ಸಾಫ್ಟೀಸ್ಮಾ ಇಂಡಿಕಮ್ ಈ ಗಿಡ ಹೆಸರು ರೂಬಿಯೇಸಿ ಬಳಗಕ್ಕೆ ಸೇರಿದ್ದು. ನಾಲ್ಕೈದಡಿ ಎತ್ತರ ಬೆಳೆಯುವ ಪೊದರು. ದಟ್ಟವಾದ ಎಲೆಹೊದಿಕೆ, ಅಗಲವಾದ ಎಲೆಗಳು, ಮೊರಿಗೆಯ ತುದಿಯಿಂದ ಹೂಗೊಂಚಲು ಕೊನರಿದೆ. ಹೂವಿನ ಗಾತ್ರ ಬಲು ಸಣ್ಣ. ಆಕರ್ಷಣೆಯಾಗಲೀ, ಬಣ್ಣವಾಗಲಿ ಬೆಡಗಿನ ರೂಪವಾಗಲಿ ಇಲ್ಲ. ಎಲೆಮರೆಯ ಹೂವಿನಂತೆ ಶೋಲೆಮರೆಯ ಗಿಡವಾದರೂ ದುರ್ನಾತದ ಕೀರ್ತಿಯಿಂದ ನಮ್ಮೆಲ್ಲರಿಗೂ ಪರಿಚಯ."[೧೦]

ಸ್ವಾಮಿಯವರು ಶಾಸ್ತ್ರದ ಪಾಠ ಹೇಳುವ ರೀತಿಯಲ್ಲಿ ಇಲ್ಲಿ ಬರೆದಿದ್ದು 'ಸಾಪ್ರೊಗಿಸ್ಮಿ ಇಂಡಿಕಮ್' ಗಿಡದ ಬಗ್ಗೆ ಕೊಡುವ ವಿವರಣೆಯು ಸಸ್ಯಶಾಸ್ತ್ರ ಮತ್ತು ಸಾಹಿತ್ಯ ಮೇಳೈಸುವ ಇವರ ಸೃಜನಾತ್ಮಕತೆಗೆ ಸಾಕ್ಷಿಯಾಗಿದೆ.

"ಕನಲ್ವ ಕೆಂಡದ ಮೇಲೆ ಬೇರಿನೆಣ್ಣೆಯಾಳಿ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ"[೧೧] ಕೃತಿಯನ್ನು ಆದಿಪಂಪನ ಕಾವ್ಯದ ಸಾಲುಗಳಿಂದ ಮುಕ್ತಾಯಗೊಳಿಸುವುದು. ಕೃತಿ ಓದುಗನ ಮನ ಸೆಳೆಯುವ ವಿಶಿಷ್ಟ ಕೃತಿಯಾಗಿದೆ. ದುರ್ನಾತದ ಈ ಹೂವು ವೆಂಕಟಲಕ್ಷ್ಮೀ ಕಂಡುಹಿಡಿದು ಇದನ್ನು ವಿವರಿಸಿದ್ದೆ ಕೃತಿಯ ಸಮಾಪ್ತಿಯಲ್ಲಿ ಸ್ವಾಮಿಯವರು ವಿವರಿಸಿ ಇದಕ್ಕೆ ದೌರ್ಗಂಧಿಕಾಪಹರಣ ಎಂದು ಶೀರ್ಷಿಕೆ ನೀಡಿದ್ದು ಔಚಿತ್ಯವಾಗಿದೆ.

**ಸಾಕ್ಷಾತ್ಕಾರದ ದಾರಿಯಲ್ಲಿ:**

ಭಾರತದಲ್ಲಿ ದಿನನಿತ್ಯ ಬಳಕೆಯಲ್ಲಿರುವ ಕೆಲವು ಸಸ್ಯಗಳನ್ನು ಕುರಿತು ಶಾಸ್ತ್ರೀಯ ಮತ್ತು ಸಾಂಸ್ಕೃತಿಕ ಅಧ್ಯಯನದ ಫಲ ಈ ಪುಸ್ತಕ. ಈ ಕೃತಿ ಇತಿಹಾಸ, ಸಾಹಿತ್ಯವನ್ನು ಏಕೀಕೃತಗೊಳಿಸುವ ನಿಟ್ಟಿನಲ್ಲಿ ಸಾಗಿದೆ. ಎಲೆ, ಅಡಿಕೆ, ಅಫೀಮ್, ಗಾಂಜಾ, ತಂಬಾಕು, ಕಾಫಿ, ಟೀ ಚಟವನ್ನು ಕುರಿತು ಬರೆದ ಇದು ಐತಿಹಾಸಿಕ ಸಂಸೋಧನಾತ್ಮಕ ಬರಹದಂತೆ ಕಂಡುಬಂದಿದೆ.

ಇತಿಹಾಸದ ರೀತಿಯಲ್ಲಿ ಕಾಣಬಹುದಾದ ಅಂಶಗಳು ಹೀಗಿವೆ. ಸ್ವಾಮಿಯವರು ಹಲವು ಅದಕ್ಕೆ ಸಾಹಿತ್ಯದ ಸ್ಪರ್ಶ ನೀಡಿರುವರು. "೧೮ನೇ ಶತಮಾನದಲ್ಲಿ ಸಂಗ್ರಹವಾದ 'ತಾಂಬೂಲ ಮಂಜರಿ'ಯಲ್ಲೂ ಅದಕ್ಕೂ ಹಿಂದಿನ ಕಾಲದ ಬರವಣಿಗೆಯಲ್ಲಿ ಕಾಣಬರುವ ಶ್ಲೋಕಗಳನ್ನು ಉದ್ಧರಿಸುವುದರಿಂದ ತಾಂಬೂಲ ಸೇವನಾಭ್ಯಾಸ ಅನೇಕ ಶತಮಾನಗಳ ಹಿಂದಕ್ಕೆ ಹೋಗುತ್ತಿದೆ. ಗಾನಭಟ (೧೭ನೆಯ ಶತಮಾನ)ನ ಪ್ರಕಾರ ತಾಂಬೂಲವು ಅಷ್ಟಭೋಗಗಳಲ್ಲಿ ಒಂದಾಗಿತ್ತು."[೧೨]

ತಾಂಬೂಲದ ಐತಿಹಾಸಿಕ ಹಿನ್ನೆಲೆಯನ್ನು ದತ್ತಾಂಶಗಳ ರೂಪದಲ್ಲಿ ತಾಂಬೂಲದ ಉಲ್ಲೇಖ ಅದರ ಸೇವನೆ ಅಭ್ಯಾಸವನ್ನು ಕುರಿತು ಐತಿಹಾಸಿಕ ನೆಲೆಯಲ್ಲಿ ಕುರಿತು ಚರ್ಚಿಸುವ ಇವರ ಬರಹವು ಸೃಜನಾತ್ಮಕ ನೆಲೆಯಿಂದ ಕೂಡಿದೆ.

ಸ್ವಾಮಿಯವರು ಈ ಕೃತಿಯಲ್ಲಿ ಮಾದಕವಸ್ತುಗಳ ಸೇವನೆಯಿಂದ ಹಾಗೂ ಕೆಟ್ಟ ಹವ್ಯಾಸಗಳಿಂದ ಮನುಷ್ಯ ಮೇಲೆ ಆಗುವ ಪರಿಣಾಮಗಳು ವಿವರಿಸುತ್ತಾ ಆರೋಗ್ಯ ಪುಷ್ಠಿ ನೀಡುವ ಮತ್ತು ಆರೋಗ್ಯ ಮರ್ಧನ ಮಾಡುವ ಸಸ್ಯಗಳ ಬಗ್ಗೆ ವಿವರಿಸುತ್ತಾ ಮನುಷ್ಯನು ಸಸ್ಯಗಳನ್ನು ತನ್ನ ಬದುಕಿನಲ್ಲಿ ಯಾವ ರೀತಿ ಸೇವನೆ ಮಾಡಿ ಆರೋಗ್ಯದ ಸಾಕ್ಷಾತ್ಕಾರ ಪಡೆಯಬೇಕು ಎಂಬುದಕ್ಕೆ ಈ ಕೃತಿ ರಚನೆಗೊಂಡಿದ್ದು, ಇದರ ತಲೆಬರಹವೇ ಸಾಕ್ಷಾತ್ಕಾರದ ದಾರಿಯಲ್ಲಿಯಾಗಿದೆ.

**ಶಾಸನಗಳಲ್ಲಿ ಗಿಡಮರಗಳು:**

ಈ ಕೃತಿಯಲ್ಲಿ ಆದಿಮಾನವ ಮತ್ತು ಅವನೊಂದಿಗೆ ಸಸ್ಯದ ನಂಟು, ಆಕಾರದಲ್ಲಿನ ಗಿಡಮರಗಳು, ರಾಜಮಹಾರಾಜರ ಕಾಲದಲ್ಲಿ ಹೊರಡಿಸಲಾದ ಶಾಸನಗಳಲ್ಲಿ ವ್ಯಕ್ತವಾಗಿರುವ ಗಿಡಮರಗಳು ಹಿಂದೆ ಈ ಗಿಡ ಮರಗಳು ಯಾವ ಉದ್ದೇಶಕ್ಕಾಗಿ ಬಳಸುತ್ತಿದ್ದರು ಎಂಬುದು ಸಾಹಿತ್ಯಿಕವಾಗಿ ಸ್ವಾಮಿ ವಿವರಿಸಿರುವರು.

ಭೂಮಿಯನ್ನು ದಾನ ನೀಡುತ್ತಿದ್ದ ರಾಜ ಮಹಾರಾಜರಿಗೆ ಭೂಮಿ ಮೀಸಲಿಡುತ್ತಿದ್ದ ಇತಿಹಾಸದ ವಿಚಾರಗಳು ಬೆರೆಸಿ ಎಕ್ಕಿ ದೂರ ತೆಗೆದು ಸಂಶೋಧನ ಲೇಖನವಾಗಿ ಬರೆದಿರುವ ಈ ಕೃತಿ ಅವರ ಸಾಹಿತ್ಯ ಸೃಜನೆಗೆ ಸಾಕ್ಷಿಯಾಗಿವೆ.

ಇತಿಹಾಸ–ಭೂಗೋಳ–ಸಾಹಿತ್ಯ ಏಕೀಭವಗೊಳಿಸುವಿಕೆಯು ಇವರ ಕಾರ್ಯ ಈ ರೀತಿ ಇದೆ.

"ನಶ್ಯ ಮಿಚ್ಚಿನವಾಡು ನರಲೋಕ ಪೊಜ್ಯಂಡು ನಶ್ಯ ಮೇಸಿನವಾಡು ಸುಗುಣಶಾಲಿ..... ಎಂದು ಆರಂಭವಾಗುವ ಪದ್ಯವನ್ನು ವೇಮನ ತಲೆಗೆ ಅಂಟಿಸಿ ಹೊಗೆಸೊಪ್ಪಿನ ಪ್ರಕಾರ ನಡೆಸಿದ್ದಾರೆ. ನಶ್ಯ ಪ್ರೇಮಿಗಳು ಕೇವಲ ೧೬ನೇ ಶತಮಾನದಲ್ಲಿ ಮೊದಲು ಕಾಲಿಟ್ಟರು."[೧೩]

ಹೀಗೆ ಹೊಗೆಸೊಪ್ಪಿನ ಇತಿಹಾಸವನ್ನು ಹೇಳುವ ಅವರ ಸರಳ ನಿರೂಪಣಾ ಭಾಷಾ ಶೈಲಿಯು ಹಾಗೂ ಇತಿಹಾಸದ ಮಹತ್ವದ ಅಂಶಗಳನ್ನು ಇರುವುದು. ಅವರ ಸೃಜನಾತ್ಮಕ ನೆಲೆಯನ್ನು ತೋರಿಸುತ್ತದೆ.

ಸಸ್ಯದ ಹೆಸರು ಸ್ವಾಮಿಯವರು ನಾನಾ ಭಾಷೆಗಳಲ್ಲಿ ನೀಡುವುದು ಅವರ ಈ ಕೃತಿಯಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಎಲೆ ಕುರಿತು ಈ ರೀತಿ ಮಾಹಿತಿ ನೀಡುತ್ತಾರೆ.

"ಮಲಯ – ಬತಾತ್, ವತಾತ್

ಸಿಂಗಪುರ – ವತ್ತತ್, ವತ್–ತ್ತಾಲ್

ಬರ್ಮಾ – ವತ್ತೆಲ್, ವೆತ್ತಾಲ್

ತಮಿಳು – ವೆತ್ತಲೆ

ಮಲೆಯಾಳಿ – ವೆತ್ತ, ವೆಟ್ಟಿಲ್, ವೆತ್ತಿಲ

ಕನ್ನಡ – ವೀಳೆಯದೆಲೆ

(ಸಂಸ್ಕೃತದ ನಾಗವಲ್ಲಿ ಎಂಬ ಹೆಸರು ಈಚೀಚೆಗೆ ಬಳಕೆ ಬಂದದ್ದು)"[೧೪] ಎಂದು ಸ್ವಾಮಿಯವರು ವಿದೇಶಿಯ ಭಾಷೆಯಲ್ಲಿ ಸಸ್ಯಗಳು ಹೀಗೆ ಕರೆಯುತ್ತಾರೆ. ಅವುಗಳ ಸ್ವಾಮ್ಯತೆ ತೋರಿಸುವುದು ಅವರ ಸೃಜನಾತ್ಮಕ ಬರಹಕ್ಕೆ ಕನ್ನಡಿಯಾಗಿದೆ.

**ಬೃಹದಾರಣ್ಯಕ**

ಬೃಹದಾರಣ್ಯಕ ಕೃತಿಯು ಕಾಡುಮರಗಳು ಮತ್ತು ಕಾಡುಪ್ರಾಣಿಗಳ ಕುರಿತು ವೈಜ್ಞಾನಿಕವಾದ ಮಾನವೀಯ ನೆಲೆಗಟ್ಟಿನ ವಿಚಾರಗಳನ್ನು ಇಲ್ಲಿ ಏಕೀಕೃತಗೊಳಿಸಿದ್ದು ಕಾಣಬಹುದು. ಸ್ವಾಮಿಯವರ ಬಹುಪಾಲು ಕೃತಿಗಳು ಸಸ್ಯವರ್ಗಕ್ಕೆ ಸೇರಿದ್ದು, ಆದರೆ ಬೃಹದಾರಣಿಕೆಯಲ್ಲಿ ಪ್ರಾಣಿಜಗತ್ತಿಗೂ ಕೈಹಾಕಿದ್ದು ಅವರ ಸೃಜನಾತ್ಮಕವಾದ ಬರಹದ ವೈಶಿಷ್ಟ್ಯತೆಯಾಗಿದೆ.

ಸ್ವಾಮಿಯವರು ಹಲವು ಅಂಕಿ–ಅಂಶಗಳನ್ನು ವಿಷಯಕ್ಕೆ ಅನುಗುಣವಾಗಿ ನೀಡುವುದು ಅವರ ಬರಹದಲ್ಲಿ ಕಾಣುತ್ತೇವೆ. ಇಲ್ಲಿಯೂ ಅಂತಹ ಬರಹವನ್ನು ಕಾಣಬಹುದು.

"೨೫ ವಯಸ್ಸಿಗೆ ಆನೆಯ ಭೌತಿಕ ಬೆಳವಣಿಗೆ ನಿಲ್ಲುತ್ತದೆ. ೧೮ ವಯಸ್ಸಿಗೆ ಮನುಷ್ಯನಂತೆ ೧೬–೧೭ನೇ ವಯಸ್ಸಿನ ಹೆಣ್ಣಾನೆ ಗರ್ಭದಾನ ತಾಳಲು ಯೋಗ್ಯತೆ ಪಡೆಯುತ್ತವೆ."[೧೫]

ಆನೆಯ ಬೆಳವಣಿಗೆ ಹಾಗೂ ಅದರ ಭೌತಿಕ ಸ್ಥಿತಿ ಹಾಗೂ ಅದರ ಗರ್ಭದಾರಣೆಯ ಅವಸ್ಥೆಯನ್ನು ಒಬ್ಬ ಪ್ರಾಣಿ ವಿಜ್ಞಾನಿಯಂತ ಬರೆದಿರುವುದು ಅವರ ಸೃಜನಾತ್ಮಕ ಬರಹಕ್ಕೆ ಸಾಕ್ಷಿಯಾಗಿದೆ.

ಸ್ವಾಮಿಯವರ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಸೃಜನಾತ್ಮಕವಾಗಿ ಮೂಡಿಬಂದಿವೆ. ಪ್ರತಿಯೊಂದು ಕೃತಿಯು ವಿಶಿಷ್ಟತೆಯಿಂದ ಕೂಡಿದೆ. ಅವರ ಬರಹವು ಓದುಗನು ಮನ ಸೆಳೆಯುವ ರೀತಿಯಲ್ಲಿವೆ. ಸಾಮಾನ್ಯ ಸ್ವಾಮಿಯವರ ಬರಹವು ಕನ್ನಡ ಸಾಹಿತ್ಯದಲ್ಲಿಯೇ ಸೃಜನಾತ್ಮಕವಾದ ನೆಲೆಯಿಂದ ಕೂಡಿದೆ.

**ಕೊನೆಟಿಪ್ಪಣಿಗಳು:**

೧. ಅಮೇರಿಕಾದಲ್ಲಿ ನಾನು, ಪುಟ-೪೪

೨. ಕಾಲೇಜು ತರಂಗ, ಪುಟ-೮೯.

೩. ಕಾಲೇಜುರಂಗ, ಪುಟ-೭೯.

೪. ತಮಿಳು ತಲೆಗಳ ನಡುವೆ, ಪುಟ-೩೩.

೫. ಪಂಚಕಲಶ ಗೋಪುರ, ಪುಟ-೯೨.

೬. ಮೈಸೂರು ಡೈರಿ, ಪುಟ-೧.

೭. ಪ್ರಾಧ್ಯಾಪಕನ ಪೀಠದಲ್ಲಿ ಪುಟ-೧೮೧

೮. ನಮ್ಮ ಹೊಟೆಯಲ್ಲಿ ದಕ್ಷಿಣ ಅಮೇರಿಕಾ, ಪುಟ-೬೩.

೯. ಫಲಶ್ರುತಿ, ಪುಟ-೯

೧೦. ದೌರ್ಗಂಧಿಕಾಪಹರಣ, ಪುಟ-೬೭.

೧೧. ದೌರ್ಗಂಧಿಕಾಪಹರಣ, ಪುಟ-೧

೧೨. ಸಾಕ್ಷಾತ್ಕಾರದ ದಾರಿಯಲ್ಲಿ ಪುಟ-೦೯.

೧೩. ಶಾಸನಗಳಲ್ಲಿ ಗಿಡಮರಗಳು, ಪು.ಸಂ.೨೬.

೧೪. ಶಾಸನಗಳಲ್ಲಿ ಗಿಡಮರಗಳು, ಪು.ಸಂ.೨೬.

೧೫. ಬೃಹದಾರಣಿಕ, ಪುಟ-೫೩.

## ಅಧ್ಯಾಯ ೪

# ಭಾಷಾಂತರ ಸಾಹಿತ್ಯ

ಡಾ. ಬಿ.ಜಿ.ಎಲ್. ಸ್ವಾಮಿಯವರು ತಮಿಳು ಭಾಷೆಯಿಂದ ಕನ್ನಡಕ್ಕೆ ನಾಲ್ಕು ಕೃತಿಗಳನ್ನು ಭಾಷಾಂತರಿಸಿರುವರು. ನಡೆದಿಯೆ ಬಾಳೌ ಕಾವೇರಿ ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ, ಜ್ಞಾನರಥ, ನವತಂತ್ರದ ಕಥೆಗಳು. ಈ ನಾಲ್ಕು ಕೃತಿಗಳಲ್ಲಿ ಅಧ್ಯಯನದ ವ್ಯಾಪ್ತಿವಾರು ಮೂರು ಕೃತಿ ಬಳಸಿಕೊಳ್ಳಲಾಗಿದೆ. ತಮಿಳು ಭಾಷೆಯಿಂದ ಕನ್ನಡ ನೆಲೆಗಟ್ಟಿಗೆ ಸ್ವಾಮಿಯವರು ಈ ಮೂರು ಕೃತಿಗಳನ್ನು ಒದಗಿಸಿದ ಬಗೆ ಮೂಲಕೃತಿಯ ಭಾಷೆಯ ಕೃತಿಕಾರನ ಪ್ರಯತ್ನ ಹಾಗೂ ಭಾಷಾಂತರಕಾರ ತನ್ನ ಭಾಷೆಗೆ ಸರಿದೂಗಿಸಿಕೊಂಡ ಬಗೆ ಹಾಗೂ ಕೃತಿಯ ಕನ್ನಡ ತಮಿಳು ಭಾಷೆ, ಸಂಸ್ಕೃತಿ, ಸಾಹಿತ್ಯಗಳ ಅದಾನ-ಪ್ರದಾನದ ಬಗೆಗೆ ಅಧ್ಯಯನ ಕೈಗೊಳ್ಳುವ ಪ್ರಯತ್ನ ಇದಾಗಿದೆ. ಮೂಲಕೃತಿಯ ವಿಷಯ, ವಸ್ತು, ಭಾಷೆಯ, ಭಾಷಾಂತರಕಾರ ಲೇಖಕ ಬಳಸಿಕೊಂಡ ಬಗ್ಗೆ ಚರ್ಚಿಸುವ ಪ್ರಯತ್ನ ಇದಾಗಿದೆ. ಇದು ತಮಿಳು ಕೃತಿಗಳ ಕನ್ನಡೀಕರಣವನ್ನು ಕುರಿತ ಚರ್ಚೆಯಾಗಿದೆ.

ತಮಿಳು-ಕನ್ನಡ, ಕಾವೇರಿ ಚರ್ಚೆ ಇಂದಿಗೂ ಪ್ರಮುಖ ರಾಜಕಾರಣದ ಆಯಾಮ ಗಳಾಗಿರುವ ಈ ಸಂದರ್ಭದಲ್ಲಿ ಬಿ.ಜಿ.ಎಲ್. ಅವರು ತಮಿಳು-ಕನ್ನಡ ಸಂಬಂಧಗಳನ್ನು ನಿರ್ವಹಿಸಿ ನಿರ್ವಚಿಸಿದ ಬಗೆ ಇಲ್ಲಿ ಮಹತ್ವದ ಅಂಶವಾಗಿದೆ.

'ನಡೆದಿಯೆ ಬಾಳೌ ಕಾವೇರಿ' ಈ ಪ್ರವಾಸ ಕಥನ ತಮಿಳು ಗ್ರಂಥ 'ನಡಂದಾಯ್ ವಾಟಿ ಕಾವೇರಿ' ಎಂಬ ಪ್ರಬಂಧದ ಅನುವಾದ. ಮೂಲದ ಕರ್ತೃಗಳು ಶ್ರೀಯುತರಾದ ಚಿಟ್ಟಿ

ಮತ್ತು ಟಿ. ಜಾನಕೀರಾಮನ್. ಮತ್ತೊಂದು ಶ್ರೇಷ್ಠ ಕೃತಿ ಸುಬ್ರಹ್ಮಣ್ಯಂ ಭಾರತೀರವರು ಬರೆದಿರುವ 'ಜ್ಞಾನರಥ' ಕೃತಿ ಡಾ. ಸ್ವಾಮಿನಾಥನ್ ಅಯ್ಯರ್ ಅವರು 'ನಾನ್ ಕಂಡದುಮ್ ಕೇಟ್ಟದ್, ೨. ನಿನ್ನೆವು ಭುಂಜರಿ, ೩. ನಲ್ಲುರೈ ಕೋವೈ (ನಲ್ಲದ್ಯಮಾಲೆ) ೪. ಘನಾ ಕೃಷ್ಣ ಅಯ್ಯರ್ ಎಂಬ ಪುಸ್ತಕಗಳಿಂದ ಆಯ್ದ ಪ್ರಬಂಧಗಳ ಸಂಕಲನವೇ 'ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ.'

ತಮಿಳುನಾಡಿನ ಶ್ರೇಷ್ಠ ಲೇಖಕರಾದ ಸುಬ್ರಹ್ಮಣ್ಯಂ ಭಾರತಿ, ಡಾ. ಸ್ವಾಮಿನಾಥ ಅಯ್ಯರ್, ತಮಿಳು ಸಾಹಿತ್ಯಕ್ಕೆ ನೀಡಿದ ಕೊಡುಗೆ ಅಪಾರ. ಅವರ ಕೃತಿಗಳನ್ನು ಕನ್ನಡಕ್ಕೆ ಡಾ. ಬಿ.ಜಿ.ಎಲ್. ಸ್ವಾಮಿಯವರು ಒದಗಿಸುವುದರೊಂದಿಗೆ ತಮಿಳು ಭಾಷೆ, ಸಂಸ್ಕೃತಿಯು ಕನ್ನಡಿಗರಿಗೆ ಪರಿಚಯಿಸುವ ಪ್ರಯತ್ನ ಮಾಡಿದ್ದಾರೆ. ಕನ್ನಡ ನೆಲೆಯಲ್ಲಿ ನಿಂತು ತಮಿಳು ಭಾಷಾ ಕೃತಿಗಳು ತಮಿಳು ವಿಷಯವಸ್ತುವಿನ ಸ್ವರೂಪ ಮತ್ತು ಕನ್ನಡ-ತಮಿಳು ಭಾಷೆಯ ಅವಿನಾಭಾವ ಸಂಬಂಧ ಹಾಗೂ ತಮಿಳು ಲೇಖಕರು ಕನ್ನಡ ನಾಡಿನ ಬಗ್ಗೆ ನೀಡಿದ ವಿವರಣೆಯನ್ನು ಈ ಕೃತಿಗಳಲ್ಲಿ ಕಾಣಬಹುದು. ಇದರಿಂದ ಎರಡು ಭಾಷೆಗಳ ನಡುವಿನ ಅದಾನ-ಪ್ರದಾನ ಎಷ್ಟರ ಮಟ್ಟಿಗೆ ಸಾಧಿಸಿದೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಜ್ಞಾನರಥ ಮೂಲ ಲೇಖಕರಾದ ಸುಬ್ರಹ್ಮಣ್ಯಂ ಭಾರತಿಯವರ ಆಶಯಕ್ಕೆ ತಕ್ಕಂತೆ ಜ್ಞಾನರಥ ಕೃತಿಯನ್ನು ಕನ್ನಡ ಕಥಾ ಸಂಕಲನದಂತೆ ಭಾಷಾಂತರಿಸಿದ್ದು, ಕನ್ನಡ ಓದುಗನ ಮನ ಸೆಳೆಯುತ್ತದೆ. ಮೊದಲ ಭಾಗದ ೫ ನೀಳ್ಗತೆಗಳು, ಎರಡನೆಯ ಭಾಗದ ೧೩ ಕಿರುಗತೆಗಳಲ್ಲಿನ ಸಾಹಿತ್ಯಿಕ-ಭಾಷಿಕ-ಸಂಸ್ಕೃತಿ-ಒಳದರಿವನ್ನು ಅಳೆಯುವುದು ಮಹತ್ವದಾಗಿದ್ದು, ಈ ದೆಸೆಯಲ್ಲಿ ಈ ಕೃತಿ ನೋಡುವ ಪ್ರಯತ್ನ ಮಾಡಲಾಗಿದೆ.

**ನಡೆದಿಯೆ ಬಾಳೌ ಕಾವೇರಿ:**

ನಡೆದಿಯೆ ಬಾಳೌ ಕಾವೇರಿ ಈ ಪ್ರವಾಸ ಕಥನ ತಮಿಳು ಗ್ರಂಥ 'ನಡಂದಾಯ್ ವಾಟು ಕಾವೇರಿ' ಎಂಬ ಪ್ರಬಂಧದ ಅನುವಾದ. ಮೂಲದ ಕರ್ತೃಗಳು ಶ್ರೀಯುತರಾದ ಚಿಟ್ಟಿ ಮತ್ತು ಟಿ. ಜಾನಕೀರಾಮನ್. ಬಿ.ಜಿ.ಎಲ್. ಸ್ವಾಮಿಯವರು ಸಾಹಿತ್ಯಿಕವಾಗಿ ತಮಿಳು ಭಾಷೆಯ ಪ್ರಭಾವದಿಂದ ಈ ಕೃತಿ ಭಾಷಾಂತರಿಸಿದ್ದು ಕಾಣಬಹುದು. ಕಾವೇರಿ ನದಿಯ ದಡದ ಮೇಲೆ ನಡೆದ ಪ್ರವಾಸದ ಅನುಭವಗಳು ಮದ್ರಾಸ್, ಬೆಂಗಳೂರು ರಸ್ತೆ ಅಂದರೆ ಕರ್ನಾಟಕ ತಮಿಳುನಾಡಿನ ಸೀಮೆಯ ಭೌಗೋಳಿಕ ವರ್ಣನೆ, ಸಂಸ್ಕೃತಿ, ಭಾಷೆ, ಜನಾಂಗ, ಇತಿಹಾಸವನ್ನು ಸ್ಪಷ್ಟಪಡಿಸುತ್ತದೆ.

ಕವಿ ಮತ್ತು ಲೇಖಕನಿಗೆ ಯಾವುದೇ ಭಾಷೆ, ಪ್ರದೇಶದ ಸ್ವಾರ್ಥವಿರುವುದಿಲ್ಲ. ಪ್ರಕೃತಿಯೇ ಅವನ ದೇಶ. ಸುಂದರವಾದ ಯಾವುದೇ ಪ್ರಕೃತಿಯನ್ನು ನೋಡಿದರು ಯಾವುದೇ ಭಾಷೆಯ ಕವಿಯು ಕವಿ ಸಮಯದ ಕಾವ್ಯ ರಚನೆಗೆ ಮುಂದಾಗುತ್ತಾನೆ ಎಂಬ ಅಂಶವನ್ನು ಈ ಕೃತಿಯು ಒಳಗೊಂಡಿದೆ. ಕಾವೇರಿಯ ಸೌಂದರ್ಯಕ್ಕೆ ತಮಿಳು-ಕನ್ನಡ ಕವಿಗಳು ಮಾರುಹೋದ ಬಗ್ಗೆ ವಿವರಿಸಲಾಗಿದೆ. ಕಾವೇರಿ ತೀರದ ಜನರ ಅನುಭವ ಮತ್ತು ಕಾವೇರಿಗೆ ಅಲ್ಲಿನ ಪ್ರದೇಶದ ವಾಸಿಗಳಿಗೆ ಇರುವ ಪ್ರೀತಿ ಅವರ ಅನುಭವಗಳನ್ನು ದಾಖಲಿಸಲಾಗಿದೆ.

ಸಾಹಿತ್ಯಿಕವಾಗಿ ಇಳಿಂಗೊಅಡಿಗಳ್ ಆದಿಯಾಗಿ ಡಿ.ವಿ.ಜಿ. ಯವರವರೆಗೆ ಕಾವೇರಿ ಪ್ರದೇಶದ ವರ್ಣನೆಯನ್ನು ಪ್ರವಾಸದ ಉದ್ದಅಗಲಕ್ಕೂ ನೆನೆಯಲಾಗಿದೆ. ತಮಿಳಿನ ಕವನಗಳನ್ನು ಸ್ವಾಮಿಯವರು ಇಲ್ಲಿ ಕನ್ನಡಕ್ಕೆ ಅನುವಾದಿಸಿ ಕೃತಿ ರಸವತ್ತಾಗಿರುವಂತೆ ಮಾಡಿದ್ದು ಗಮನಾರ್ಹವಾಗಿದೆ.

'ಪೂವರ್ ಶೋಲೈ ಮಯಿಲಾಲ ಪುರಿಂದು ಕುಯಿಲ್‌ಗಳ ಇಶೈ ಪಾಡ

ಕಾಮರ್ ಮಾಲೈ ಅರುಗಶ್ವೆಯ ನಡಂದಾಯ್ : ವಾಟು ಕಾವೇರಿ! ಎಂಬ ಇಳಂಗೋರ ಕವಿತೆಯನ್ನು ಕನ್ನಡಕ್ಕೆ ಲೇಖಕರು ಭಾಷಾಂತರಿಸಿದ್ದಾರೆ.

> "ಹೂದೋಟಗಳಲ್ಲೂ ನವಿಲುಗಳ್ ನರ್ತಿಸೆ
> ನವಿಲಿನ ಸವಿಗೂರಲ್ ನಾದಗಳುಲಿಯೆ
> ಭ್ರಮೆಯನು ಹೊಮ್ಮುವ ಸಂಜೆಯ ಹೊತ್ತಲಿ
> ನಡೆದಿದೆ ಬಾಳಾ ಕಾವೇರಿ!"[1]

ಕನ್ನಡ ಸಂದರ್ಭಕ್ಕೆ ಅನುಗುಣವಾಗಿ ಬಿ.ಜಿ.ಎಲ್. ಸ್ವಾಮಿಯವರು ಈ ಪ್ರವಾಸ ಕಥನದಲ್ಲಿ ಮೂಲ ಲೇಖಕರ ಇಳಂಗೋರ ಕವನವನ್ನು ಸ್ಮರಿಸಿದ್ದು, ಕನ್ನಡ ಓದುಗರಿಗೆ ಸ್ವಾಮಿಯವರು ಅದೇ ದಾಟಿಯಲ್ಲಿ ನೀಡುತ್ತಾರೆ. ಕವನದ ರೂಪದಲ್ಲಿಯೇ ಲೇಖಕರು ಭಾಷಾಂತರಿಸಿದ್ದು ಕಾಣುತ್ತೇವೆ. ಕೆಲವೊಂದು ಕವಿತೆಗಳ್ನು ಗದ್ಯ ರೂಪದಲ್ಲಿ ರೂಪಾಂತರಿಸಿದ್ದಾರೆ. ಕಾವೇರಿಯ ವರ್ಣನೆಯ ಸೊಬಗು ಕವಿಗಳು ಸ್ಮರಿಸುವ ಬಗೆಯನ್ನು ಸ್ವಾಮಿಯವರು ಮೂಲ ಲೇಖಕರು ತಮಿಳಿನಲ್ಲಿಯೇ ಇರುವ ಕವಿತೆಯ ಯಥಾರೂಪವನ್ನು ಲಿಪ್ಯಂತರವಾಗಿಸಿದ್ದಾರೆ. ಅದರ ಗದ್ಯ ರೂಪದ ಅನುವಾದ ನೀಡಿದ್ದಾರೆ.

"ಕೊಳ್ ನಿಲ್ವ ತಿರಿಂದು ಕೋಡೈ ನೀಡಿಮಂ
ತಾನ್ ನಿಲೈ ತಿರಿಯಾತ್ತಣ್ಣ ಮೀಟ್ ಪಾವೈ
ಎಂದೂ ಶಾರತ್ತನಾರೊ
ವಸಮಿಲ್ ಮಹಳ್ ವಯಂಗು ವೆಣ್ಮೀನ್
ದಿಸೈ ತಿರಿಂದು ತೆರ್ಕೇಕಿನುಂ
ತರ್ಪಾಡಿಮೆ ಕಳಿ ಉಣವಿನ್ ಪುಳ್ ತೇಂಬಪ್ ಪಮನ್ಮಾರಿ
ವಾನ್ ಪೊಯ್ಯಪ್ಪಿನಂ ತಾನ್ ಪೊಯ್ಯಾ
ಮಲೈತ್ತಲೈ ಇಮ ಕಡರ್ ಕಾವೇರಿ!"[೨]

ಎಂದು ಸ್ಮರಿಸಿದ ಪಟ್ಟಿನಾಪ್ಪಾಲೆಪಯನ ಕವನದ ಗದ್ಯರೂಪದ ಅನುವಾದ ಸ್ವಾಮಿಯವರು ಮಾಡಿದ್ದು ಕಾವೇರಿ ಪ್ರದೇಶವು ಬಿಸಿಲು ಕಾಲದಲ್ಲಿಯೂ ಪೂಯ್ಯಾದ ಕಾವೇರಿಯಾಗಿಲ್ಲ. ಬೇಸಿಗೆಯಲ್ಲೂ ತಿರಂಚಿ, ಕನ್ನಡ, ಕೊಡುಗು, ಕೋಯಮತ್ತೂರು ಪ್ರದೇಶಗಳಲ್ಲಿ ಪೂಯ್ಯಾದ ಕಾವೇರಿಯಾಗಿದ್ದಾಳೆ ಎಂದು ಸಾರಾಂಶ ರೂಪದಲ್ಲಿ ಹೇಳುತ್ತಾರೆ.

ಈ ಕೃತಿಯಲ್ಲಿ ಕನ್ನಡಿಮಣ್ಣಿನಲ್ಲಿ ನಡೆದ ಐತಿಹ್ಯಗಳು ಮೂಲ ಲೇಖಕರು ಒದಗಿಸಿದ್ದನ್ನು ಸ್ವಾಮಿಯವರು ಕನ್ನಡಕ್ಕೆ ಅನುವಾದಿಸುವರು. ಆ ಐತಿಹ್ಯವೆಂದರೆ ೧೭ನೇ ಶತಮಾನದ ಆರಂಭದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರತಿನಿಧಿ ತಿರುಮಲರಾಜ ಮತ್ತು ಆತನ ಹೆಂಡತಿ ರಂಗಮ್ಮಳ ಮೂಗುತಿಯ ಅಪಹರಣಕ್ಕೆ ಮೈಸೂರು ಅರಸರು ದಂಡೆತ್ತಿ ಬಂದಾಗ ರಂಗಮ್ಮ ಮೂಗುತಿ ಕಾವೇರಿ ನದಿಗೆ ಎಸೆದು ತಾನು ಆತ್ಮಾಹುತಿ ಮಾಡಿಕೊಳ್ಳುವಾಗ ತಲಕಾಡು ಪೊರ ಮಣ್ಣುಮುಚ್ಚಿ ಹೋಗಲಿ! ಮೂಲಂಗಿ ಸುಳಿಯ ಮಡುವಾಗಲಿ! ಮೈಸೂರು ಅರಸರಿಗೆ ಮಕ್ಕಳಾಗದೆ ಹೋಗಲಿ! ಎಂಬ ಶಾಪ ನೀಡಿದ ಐತಿಹ್ಯವು ಕನ್ನಡ ತಮಿಳುನಾಡಿನ ಗಡಿಭಾಗದಲ್ಲಿ ಪ್ರಚಲಿತವಿದ್ದ ಬಗ್ಗೆ ಲೇಖಕರು ಸ್ಮರಿಸಿದ್ದು ಎರಡು ರಾಜ್ಯದ ಸಂಸ್ಕೃತಿಯ ಏಕೀಕರಣವನ್ನು ತೋರಿಸುತ್ತದೆ.

ಮೂಲ ಲೇಖಕರು ಡಿ.ವಿ.ಜಿ.ಯವರ ಕವಿತೆಯನ್ನು ಕಾವೇರಿಯ ಆರ್ಭಟಕ್ಕೆ ರೂಪ ನೀಡಿದ ಬಗೆಯನ್ನು ಸ್ವತಃ ಸ್ವಾಮಿಯವರು ಮೂಲ ಲೇಖಕರ ಮುಂದೆ ಒಮ್ಮೆ ಉಚ್ಚರಿಸಿದ್ದು ಲೇಖಕರು ಸ್ಮರಿಸುತ್ತಾರೆ. ಕಾವೇರಿ ವರ್ಣನೆಯ ರೂಪದ ಪ್ರಚಲಿತವಾದ ಸಾಲುಗಳನ್ನು ಸೇರಿಸಿರುವುದು ಕಂಡುಬರುತ್ತದೆ.

"ಗಿರಿಯ ಕೆಲದಿ ಬನದ ನಡುವೆ ಝುರಿಯ ತೆರದಿ ಸುಳಿದು ಬರುತೆ!
ಕಲದಶಿಲೆಯನಿರಿದು ಕೊರೆದು ಕೆಲದ ನೆಲವನರೆದು ಮುರಿದು॥

ವಿಮಲ ಜಲದ ವಿಮುಲ ಧಾರೆಯಮೃತ ಲಹರೆಯಂತೆ ತೋರೆ।

ದಣಿವ ಕಳೆಯುವೆಲರ ಬೀರಿ ಮೃದಲರವದಿ ಮುಂದೆ ಸಾರಿ।

ಅತ್ತಲತ್ತ ಸುಳಿದು ಸುತ್ತಿ ಇತ್ತಲಿತ್ತ ಮೆಲ್ಲನೊತ್ತಿ ।

ಅಲ್ಲಿ ಬಳಕು ತಿಲ್ಲಿ ಬಾಗಿ ಅಲ್ಲಿ ಬಳಸು ತಿಲ್ಲಿ ಸಾಗಿ

ನೊರೆಯ ಸೀಸೆಗಳನ್ನು ಸೂಸಿ ತೆರೆಯ ಚವರಗಳನ್ನು ಬೀರಿ

ಬಾಲೆಯಂತೆ ನಲಿದು ಕುಣಿದು ಕಾಳಿಯಂತೆ ಕನಲಿ ಮೊರೆದು॥”[೩]

ಮೇಲಿನ ಡಿ.ವಿ.ಜಿ.ಯವರ ಕವಿತೆಯ ಸಾಲುಗಳು ಮೂಲಕೃತಿಯಲ್ಲಿ ಇರುವುದು ಮತ್ತು ಭಾಷಾಂತರ ಕೃತಿಗಳಲ್ಲಿ ನೆನೆಯುವುದು. ಎರಡು ಭಾಷೆಯ ಸಾಹಿತಿಕ ಸೌಜನ್ಯದ ಮನೋಭಾವವನ್ನು ತೋರಿಸುತ್ತದೆ. ಸ್ವಾಮಿಯವರು ತಾವೇ ಹೇಳಿದ ತಂದೆಯವರ ಕವಿತೆಯನು ಮೂಲ ಲೇಖಕರು ಸ್ಮರಿಸಿದ್ದು, ಅದನ್ನು ಯಥಾವತ್ತಾಗಿ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಕನ್ನಡ ಮತ್ತು ತಮಿಳು ಜನರಿಗೆ ಕೃತಿ ವಸ್ತು, ವಿಷಯ ಇದರಿಂದ ಹತ್ತಿರವಾದಂತೆ ಕಾಣುತ್ತದೆ.

ಬಿ.ಜಿ.ಎಲ್. ಸ್ವಾಮಿಯವರು ತಮ್ಮ ಭಾಷಾಂತರಿಸಿದ ಕೃತಿಯಲ್ಲಿ ತಮ್ಮ ಮತ್ತು ತಮ್ಮ ತಂದೆಯವರ ಹೆಸರು ಪ್ರಸ್ತಾಪವಾದದರಿಂದ ಭಾಷಾಂತರದ ಸಂಕಲ್ಪ ಚಿಗುರಲಿಲ್ಲ ಎಂದು ಹೇಳಿದ್ದು, ಅವರ ವ್ಯಕ್ತಿತ್ವದ ನಿರ್ದಶನದಾಗಿದೆ. ತದನಂತರದಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಹಸ್ತಾಕ್ಷರದ ಮರುಜೋಡಣೆಯೇ ಕೆ.ವಿ. ರಮೇಶರ ಶ್ರಮ ಈ ಪುಸ್ತಕ ಕನ್ನಡಕ್ಕೆ ಒದಗಿಸಲು ಕೊಡಲಿ ಕೃಷ್ಣಮೂರ್ತಿಯವರ ಶ್ರಮದ ಫಲವಾಗಿದೆ.

ಕೃತಿಯ ಉದ್ದಕ್ಕೂ ಕವಿವಾಣಿಗಳನ್ನು ಸ್ಮರಿಸುತ್ತಾ ಸಾಗುವ ಈ ಪ್ರವಾಸ ಕಥನವು ಕನ್ನಡ ಮತ್ತು ತಮಿಳು ಸಾಹಿತ್ಯದ ಭೌಗೋಳಿಕ ಸನ್ನಿವೇಶದ ಅಂತರ್ ಅವಿನಾಭಾವದ ಸಂಬಂಧವನ್ನು ತೋರಿಸುತ್ತದೆ. ಕನ್ನಡ ಪ್ರದೇಶಗಳನ್ನು ಕುರಿತು ತಮಿಳು ಕವಿಗಳು ವರ್ಣಿಸಿದ್ದು, ಅಂದಿನ ಏಕೀಕೃತ ದ್ರಾವಿಡ ಜನಾಂಗದ ಸಂಸ್ಕೃತಿ ಏಕ ಭೂಪ್ರದೇಶವಾದ ಕರ್ನಾಟಕ ತಮಿಳುನಾಡು ಇಂದು ಆಡಳಿತ ದೃಷ್ಟಿಯಿಂದ ಬೇರೆಗೊಂಡಿದ್ದರೂ ಕವಿ ಹೃದಯ, ಜನರ ಮನೋಭಾವ ಕನ್ನಡ ತಮಿಳರ ಏಕತೆ ಸಮ್ಮಿಶ್ರ ಸಂಸ್ಕೃತಿಯನ್ನು ಬಿಂಬಿಸುತ್ತದೆ.

ಒಟ್ಟಿನಲ್ಲಿ ಸಾಹಿತ್ಯಿಕವಾಗಿ ಈ ಕೃತಿಯಲ್ಲಿ ತಮಿಳು ಗ್ರಂಥಗಳ ಪ್ರಭಾವ ಎದ್ದು ಕಾಣುತ್ತದೆ. ಸ್ವಾಮಿಯವರ ಸಾಹಿತ್ಯಿಕ ಶೈಲಿ ಇಲ್ಲಿ ವಿಭಿನ್ನವಾಗಿ ಕಾಣುತ್ತವೆ. ಅವರ ಬೇರೆ ಕೃತಿಯಲ್ಲಿನ ಸರಳ ಹಾಸ್ಯ, ರೂಪತೆ ಅಲ್ಲಲ್ಲಿ ಕಂಡುಬಂದರೂ ಕೂಡ ಮೂಲ ಕೃತಿಯ ಆಶಯಕ್ಕೆ ಧಕ್ಕೆಯಾಗದಂತೆ ಭಾಷಾಂತರಿಸಿದ್ದು ಕಾಣಬಹುದು.

ಭಾಷಿಕವಾಗಿ ಈ ಕೃತಿಯನ್ನು ಡಾ.ಬಿ.ಜಿ.ಎಲ್. ಸ್ವಾಮಿಯವರು ಶಿಷ್ಟವಾದ ಭಾಷೆಯ ಶಿಷ್ಟವಾದ ಭಾಷೆಯ ಬಳಕೆಯಲ್ಲಿ ಕೃತಿ ರಚನೆಗೈದಿರುವರು. ಸರಳವಾದ ಭಾಷೆಯನ್ನು ಬಳಸಿದ್ದಾರೆ. ಸ್ಥಳನಾಮಗಳು, ವ್ಯಕ್ತಿನಾಮಗಳು, ಯಥಾವತ್ತಾಗಿ ತಮಿಳು ರೂಪದಲ್ಲಿಯೇ ಭಾಷಾಂತರಿಸಿರುವರು. ಮೂಲತಃ ಅವರ ಪ್ರವಾಸದ ಅನುಭವ ಕನ್ನಡ-ತಮಿಳು ನಾಡಿನ ಗಡಿಭಾಗದ ಜನರೊಂದಿಗಿನ ಮತ್ತು ತಾವು ನಡೆಸಿದ ಸಂಭಾಷಣೆಯನ್ನು ಬಿ.ಜಿ.ಎಲ್. ಸ್ವಾಮಿಯವರು ಕನ್ನಡದ ಜಾಯಾಮಾನಕ್ಕೆ ತಕ್ಕಂತೆ ಬಳಸಿದ್ದಾರೆ.

ತಮಿಳು ಕವಿತೆಗಳನ್ನು ಯಥಾವತ್ತಾಗಿ ಕನ್ನಡ ಲಿಪಿಯಲ್ಲಿ ಸ್ವಾಮಿಯವರು ಕನ್ನಡಕ್ಕೆ ತಂದಿದ್ದಾರೆ. ಕೆಲವು ಕವಿತೆಗಳನ್ನು ಕನ್ನಡಿಕರಿಸಿದ್ದು ಕಾಣುತ್ತೇವೆ. ಕೆಲವು ಕವಿವಾಕ್ಯಗಳನ್ನು ತಮಿಳಿನಲ್ಲಿಯೇ ತಂದಿದ್ದಾರೆ. ಕವಿವಾಕ್ಕೂ ಪೊಯ್ಯ್ಯಾದು ಪಿಟ್ಟ್ವೈತ್ತು ನಿಂತಿದೆ. ನಡೆದಿಯೆ ಬಾಳಕಾವೇರಿ ಎಂಬ ವಾಕ್ಯಗಳ ಯಥಾರೂಪವನ್ನು ಬಳಸಿದ್ದು ಕಾಣಬಹುದು. ಆಂಗ್ಲಪದಗಳು ಕೃಷಿಯುದ್ದಕ್ಕೂ ಅಲ್ಲಲ್ಲಿ ನುಸುಳಿದ್ದು ಕಾಣಬಹುದು.

"ಅದಕ್ಕೂ ಆಚೆ ಶಿವಸಮುದ್ರ ಎಂಬ ಮಲೆ ಇಳಿ ಜಾರು ಕಾಣುತ್ತದೆ."[೪] ನಡೆದಿಯೆ ಬಾಳೌ ಕಾವೇರಿ ಕೃತಿಯು ಭಾಷಿಕವಾಗಿ ಕನ್ನಡ-ತಮಿಳು ಭಾಷೆಗಳ ಮಿಶ್ರಣದಂತೆ ಕಂಡುಬಂದಿದ್ದು ಕಾಣುತ್ತೇವೆ. ಕನ್ನಡ-ತಮಿಳು ಸಾಹಿತಿಗಳ ವರ್ಣನೆಗಳು ಲೇಖಕರು ನೆನೆದಿದ್ದು ಇಲ್ಲಿ ದಾಖಲಿಸಿದ್ದು ನೋಡಿದರೆ ಸಂಪೂರ್ಣ ಕೃತಿಯು ತಮಿಳು-ಕನ್ನಡ ನೆಲೆಗಟ್ಟಿನಲ್ಲಿ ಕನ್ನಡ ಓದುಗರ ಗಮನ ಭಾಷಿಕವಾಗಿ ಸೆಳೆಯುತ್ತದೆ. ಗ್ರಂಥರೂಪದ ಭಾಷೆಯನ್ನು ಬಳಸಿದ್ದರು. ಅಲ್ಲಲ್ಲಿ ಸಂಭಾಷಣೆಗಳು ನಾಟಕೀಯ ರೂಪದಲ್ಲಿ ಗಮನ ಸೆಳೆಯುತ್ತವೆ.

ಸಾಂಸ್ಕೃತಿಕವಾಗಿ ನಡೆದಿಯೆ ಬಾಳೌ ಕಾವೇರಿ ಕೃತಿಯು ಕರ್ನಾಟಕ-ತಮಿಳುನಾಡಿನ ಗಡಿಭಾಗದ ಐತಿಹ್ಯಗಳು, ನಂಬಿಕೆಗಳು, ಈ ಭಾಗದ ಜನರ ಮನೋಭಾವನೆಯನ್ನು ಪ್ರತಿಬಿಂಬಿಸುತ್ತದೆ. ಕನ್ನಡ ಜಾಯಾಮಾನಕ್ಕೆ ತಕ್ಕಂತೆ ಡಾ. ಬಿ.ಜಿ.ಎಲ್. ಸ್ವಾಮಿಯವರು ಭಾಷಾಂತರಿಸಿದ್ದು ಮೂಲ ಕೃತಿಯ ವಿಷಯವಸ್ತುವೇ ಇಲ್ಲಿ ಯಥಾವತ್ತಾ ರೂಪವಾಗಿ ಬಂದಿದೆ. ಕನ್ನಡ-ತಮಿಳುನಾಡಿನ ಪ್ರಾಚೀನ ಇತಿಹಾಸ-ಧಾರ್ಮಿಕ ನಂಬಿಕೆಯ ಕುರುಹುಗಳು ಈ ಪ್ರವಾಸ ಕಥನದಲ್ಲಿ ಮೂಡಿಬರುತ್ತವೆ.

ಕನ್ನಡ ಮತ್ತು ತಮಿಳುನಾಡಿನ ಜನರಿಗೆ ಕಾವೇರಿ ಎಷ್ಟು ಪೂಜ್ಯಳು ಎಂಬುದು ಕೃತಿಯಲ್ಲಿ ಕಂಡುಬರುತ್ತದೆ. ಕಾವೇರಿಗೆ 'ಪೊನ್ನಿ' ಎಂಬ ಪದ ಎಷ್ಟು ಆತ್ಮೀಯವಾಗಿ

ತಮಿಳರು ಭಾವಿಸುತ್ತಾರೋ ಕನ್ನಡಿಗರೂ ಹಾಗೇ ಭಾವಿಸುತ್ತಾರೆ. ವೈಧಿಕ ಧರ್ಮದ ದೇವಾಲಯಗಳು, ಮುನಿಗಳನ್ನು ಇಲ್ಲಿ ಸಂದರ್ಭಕ್ಕೆ ಅನುಗುಣವಾಗಿ ನೆನೆಯಲಾಗಿದೆ. ಅಗಸ್ತ್ಯ ವಿಶ್ವಮಿತ್ರ ಮುಂತಾದವರ ಹೆಸರುಗಳ ಪ್ರಸ್ತಾಪವು ಕಂಡುಬರುತ್ತದೆ. ಒಟ್ಟಿನಲ್ಲಿ ನಡೆದಿಯೆ ಬಾಳೌ ಕಾವೇರಿ ಕೃತಿಯು ಕರ್ನಾಟಕ ತಮಿಳುನಾಡು ಪರಿಸರ ಸಂಸ್ಕೃತಿಯೊಂದಿಗೆ ಪ್ರಾಚೀನ ದಕ್ಷಿಣ ಭಾರತದ ಸಂಸ್ಕೃತಿಯನ್ನು ಅಲ್ಲಲ್ಲಿ ಬಿಂಬಿಸುತ್ತದೆ.

**ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ:**

ಡಾ. ಸ್ವಾಮಿನಾಥ ಅಯ್ಯರ್ ಪ್ರಬಂಧಗಳ ಸಂಕಲನದ ಆಯ್ದ ಭಾಗಗಳು ಡಾ.ಬಿ.ಜಿ.ಎಲ್. ಸ್ವಾಮಿಯವರು ಕನ್ನಡದಲ್ಲಿ ತಂದಿರುವ ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ ಕೃತಿಯು ಈ ಕೃತಿಯು ತಮಿಳು ಸಾಹಿತ್ಯಿಕ ಪರಿಸರದಲ್ಲಿ ರೂಪಗೊಂಡಿದ್ದು ಕನ್ನಡ ಓದುಗನಿಗೆ ತಮಿಳು ಸಾಹಿತಿಕ ಪರಿಸರದ ಪರಿಚಯ ಮಾಡಿಕೊಡುತ್ತದೆ. ಅಯ್ಯರ್‌ರವರ ಅನುಭವದ ಕಥನವಾಗಿ ರೂಪಗೊಂಡಿದ್ದು ಈ ಕೃತಿಯ ಕನ್ನಡ ನೆಲೆಯಲ್ಲಿ ನಿಂತು ತಮಿಳಿನ ಅನುಭವ, ಸಾಹಿತ್ಯಿಕ ಪರಿಸರವನ್ನು ಅರಿಯಲು ಡಾ. ಬಿ.ಜಿ.ಎಲ್.ರ ಅನುವಾದ ಗಮನಾರ್ಹವಾಗಿದೆ.

ತಮಿಳಿನ ಹತ್ತು ಹಾಡು (ಪತ್ತುಪಾಡು) ಪ್ರತಿ ಹುಡುಕಿಕೊಂಡು ಹೋಗುವಾಗ ಬೆಳುದಿಂಗಳಲ್ಲಿ ದೊರೆತ ಅವರ ಹುಡುಕಾಟದ ಫಲವೇ ಈ ಕೃತಿಯ ತಲೆಬರಹವನ್ನಾಗಿದೆ. ಕೃತಿಯ ಉದ್ದಕ್ಕೂ ತಮಿಳು ಸಾಹಿತ್ಯ, ಸಂಸ್ಕೃತಿ ಬಿಂಬಿಸುತ್ತಾ ಹೋಗುವ ಈ ಕೃತಿಯು ಕನ್ನಡ ಓದುಗನಿಗೆ ತಮಿಳು ಮೂಲಕೃತಿ ಅಂಶಗಳಲ್ಲಿ ಓದಿದಂತೆ ಭಾಸವಾಗುತ್ತಿದೆ. ಈ ದೆಸೆಯಲ್ಲಿ ಈ ಕೃತಿಯನ್ನು ಸಾಹಿತ್ಯಿಕವಾಗಿ, ಭಾಷಿಕವಾಗಿ, ಸಾಂಸ್ಕೃತಿಕವಾಗಿ ನೋಡುವ ಪ್ರಯತ್ನ ಮಾಡಲಾಗಿದೆ.

**ಸಾಹಿತ್ಯಿಕವಾಗಿ**

ಪ್ರಬಂಧ ಸಂಕಲನ, ಸ್ವ ಅನುಭವದ ಕಥನ, ಕಥನ ರೂಪದ ನಿರೂಪಣೆಯನ್ನು ಈ ಕೃತಿಯಲ್ಲಿ ಕಾಣಬಹುದು. ಸ್ವಾಮಿನಾಥನ್ ಅಯ್ಯರ್‌ರವರ ಅನುಭವದ ಕಥನ–ಕಥನ ರೂಪದ ನಿರೂಪಣೆಯನ್ನು ಈ ಕೃತಿಯಲ್ಲಿ ಕಾಣಬಹುದು. ಸ್ವಾಮಿನಾಥನ್ ಅಯ್ಯರ್‌ರವರ ಅನುಭವದ ಯಥಾರೂಪವನ್ನು ಡಾ. ಬಿ.ಜಿ.ಎಲ್. ಸ್ವಾಮಿಯವರು ಕನ್ನಡಿಕರಿಸಿರುವರು. ತಮಿಳು ಪದ್ಯಗಳು ಕನ್ನಡದಲ್ಲಿ ಸ್ವಾಮಿಯವರು ಅನುವಾದಿಸಿದ್ದು ಕಾಣುತ್ತದೆ.

"ಕಂಡಲರ ವಾಟಿಕೆಯ ಪರಿಸರದಿ ವಿದರಿಸುವ ದುರ್ಗೆ ನಾನು
ಅಳಿಯದಿಹ ವೈಭವದಿ ಬೆಳಗುತಿಹೆ ದೊರೆಯಳಿಯನರಮನೆಯನು
ಸೇರಿ ಸಿರಿಮಾಳಿಗೆಯ ನೆರಳಿಲಿಹ ಕವಿಜನಕ್ಕೆ ಶ್ರದ್ಧೆಯಿಂದ
ಪಂಕವಳೆಯುವ ಭಾಗ್ಯ ಎನಗಾಯ್ತು ಪೂರ್ವಜರ ಭಾಗ್ಯದಿಂದ
ಬೆಳುದಿಂಗಳು ಅರಳಿದ ಮಾಲೆ"[೫]

ಕನ್ನಡ ರೂಪದಲ್ಲಿ ಅರ್ಥವತ್ತಾಗಿ ಸ್ವಾಮಿಯವರು ಕನ್ನಡಕ್ಕೆ ತಂದಿದ್ದು ಕನ್ನಡ ಸಾಹಿತ್ಯಿಕ ಪರಿಸರದಿಂದ ಓದುವಾಗ ಕನ್ನಡ ಪರಿಸರವೇ ಕೃತಿ ಎಂಬಂತೆ ಕಾಣುತ್ತದೆ. ತಮಿಳಿನ ಹಲವು ಕವಿಗಳನ್ನು ಮತ್ತು ಕೃತಿಗಳನ್ನು ಯಥಾವತ್ತಾಗಿ ಸ್ವಾಮಿಯವರು ಬಳಸಿಕೊಂಡಿರುವರು. ಕಾಳಮೇಘ ಕವಿ, ಕಪಾಲನು ಮುಂತಾದ ತಮಿಳು ಕವಿಗಳ ಹೆಸರುಗಳನ್ನು ಕಾಣಬಹುದು.

ಪಠ್ಯಕ್ಕೆ ಅನುಗುಣವಾಗಿ ಅಲ್ಲಲ್ಲಿ ಬರುವ ತಮಿಳು ಕವಿತೆಗಳ ಕನ್ನಡ ರೂಪದಲ್ಲಿ ಕಾಣಬಹುದು. ಪ್ರತಿ ಪದ್ಯದ ಸಾಲುಗಳು ಕನ್ನಡದ್ದೇ ಎಂಬಂತೆ ಸ್ವಾಮಿಯವರು ಅನುವಾದಿಸಿರುವರು.

"ಕೊಡುಗೈ ಪಾರಿಯನೊಬ್ಬನ ಕುರಿತೇ
ಕವಿಗಳೆಲ್ಲರೂ ಹಾಡುವರು
ಪಾರಿಯ ನುತಿಯನೆ ತಿರುಗಿ ತಿರುಗಿಯೂ
ನಾಲಿಗೆಯ ತುದಿಯಲ್ಲಿ ನುಡಿಯುವರು
ಇಹವನು ಪೊರೆಯಲು ಪಾರಿಯಾದೊಬ್ಬನೆ?
ಮಾರಿಯು ಲೋಕವ ಸಲಹುವಳು
ಬೆಳದಿಂಗಳಲ್ಲಿ ಅರಳಿದ ಮಾಲೆ"[೬]

ಈ ಕವಿತೆಯಲ್ಲಿ ಪಾರಿಯಯೆಂಬ ತಮಿಳಿನ ಬಳಕೆಯ ಶಬ್ದದೊಂದಿಗೆ ನಾಲಿಗೆಯ ಸರಿಯಲ್ಲಿ ನುಡಿಯುವರು ಎಂಬ ಅಚ್ಚ ಹೊಸ ಕನ್ನಡದ ರೂಪ ಬಳಸಿದ್ದು ಸ್ವಾಮಿಯವರ ಅನುವಾದದ ಅದ್ಭುತ ನೆಲೆಯಾಗಿದೆ. ಕೃತಿಯು ಸಾಹಿತ್ಯಿಕವಾಗಿ ಗಮನಿಸಿದಾಗ ಕಥನ ರೂಪದಲ್ಲಿ ಕನ್ನಡ ಸಂದರ್ಭಕ್ಕೆ ಅನುಗುಣವಾಗಿ ತಮಿಳಂ ವಿಷಯ ವಸ್ತುವಿನೊಂದಿಗೆ ಅನುವಾದಿಸಿದ್ದು ಕಾಣಬಹುದು. ಮೂಲಕೃತಿಯಲ್ಲಿ ಲೇಖಕರು ನೆನೆಯುವ ಕೆಲಕವಿತೆಗಳನ್ನ ತಮಿಳು ರೂಪದಲ್ಲಿ ಕನ್ನಡ ಲಿಪಿಯಲ್ಲಿ ಕಾಣಬಹುದು.

"ನಾಲ್ವಕ್ಕೆ ಮರಪ ನರೂಪಪ್ ಪಿಟಮುರುಮ್
ನಾನಾಲ್ ವಕೈಯಿ ನುರುಪಪ್ ಪಿಟಮರಾಮ್
ಇರುವಕೈಚ್ ಚುಟರು ಮಿರುಮೂ ವಕೈಯಿ
ಪೆರುವನಪ್ ಪೆಯ್ದಿಯ ದೈವತ ಕಣಂಗಳುಮ್"[೭]

ಎಂಬ ಮೂಲ ಲೇಖಕರು ಓದಿದ ಪರಿಯನ್ನು ಕನ್ನಡದಲ್ಲಿ ಸ್ವಾಮಿಯವರು ಪ್ರಧಾನವಾದ ಅನುವಾದ ಸಂಬಾಷಣೆಗಳು ಕನ್ನಡ ಪ್ರಧಾನವಾದ ಅನುವಾದ ಕೃತಿಯಾಗಿ ಕಂಡರು. ಈ ಕೃತಿಯಲ್ಲಿ ವಸ್ತುವಿಷಯಕ್ಕೆ ಅನುಗುಣವಾಗಿ ತಮಿಳು ಕವಿತೆಯ ಕನ್ನಡ ಅನುವಾದವಿಲ್ಲದ ತಮಿಳು ರೂಪದಲ್ಲಿ ಲಪಿಡ್ಯಾಂರ ಕವಿತೆಗಳು ಕಂಡುಬರುತ್ತವೆ.

ಈ ಕೃತಿಯಲ್ಲಿ ಕಥಾನಗಳಲ್ಲಿ ಕಥಾನ ರೂಪದ ಸಂಭಾಷಣೆಯು ಕನ್ನಡ ಕಥೆಗಳಂತೆ ಕಾಣುತ್ತವೆ. "ಬಂಡಿಗಾರ : ಇಲ್ಲ ; ಈಗ ನನಗೆ ಹಸಿವಿಲ್ಲ. ಹೋಗುವ ದಾರಿಯಲ್ಲಿ ತಿಳಿದವರ ಮನೆ ಇದೆ. ಅಲ್ಲಿ ಊಟ ಮಾಡುತ್ತೇನೆ.

ಕವಿರಾಯ : ಸರಿ ಇದೋ ಬಾಡಿಗೆ ರೂಪಾಯಿ ತೆಗೆದುಕೊಂಡು ಹೋಗು, ಎನ್ನುತ್ತಾ ಹಣ ಕೊಡಲು ಮುಂದಾದರು."[೮]

ಈ ರೀತಿಯಲ್ಲಿ ಕಥೆಯಲ್ಲಿನ ಸಂಭಾಷಣೆಯು ಸಾಹಿತ್ಯಿಕವಾಗಿ ಕನ್ನಡದೇ ಎಂಬಂತೆ ಕಾಣುತ್ತೇವೆ. ಕಥೆಗಳು ಕನ್ನಡದ ಮಕ್ಕಳ ಕಥೆಗಳು ಮತ್ತು ನೀತಿ ಕಥೆಗಳಂತೆ ಕಾಣುತ್ತೇವೆ. ಸ್ವಾಮಿಯವರು ಕನ್ನಡದ ಕಥೆ ಎಂಬಂತೆ ಇಲ್ಲಿ ಭಾಷಾಂತರಿಸಿದ್ದು ಕಾಣಬಹುದು. ಒಟ್ಟಿನಲ್ಲಿ ಈ ಕೃತಿಯು ಸಾಹಿತ್ಯಿಕವಾಗಿ ಕನ್ನಡದ ನೆಲೆಯಲ್ಲಿ ತಮಿಳುಪಾತ್ರ ಚಿತ್ರದ ಸನ್ನಿವೇಶದ ವಿಶ್ಲೇಷಣೆಯಾಗಿದೆ.

**ಭಾಷಿಕ:**

ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ ಕೃತಿಯಲ್ಲಿ ತಮಿಳು ಪದಗಳು ವಸ್ತು ವಿಷಯಕ್ಕೆ ಅನುಗುಣವಾಗಿ ಕೃತಿಯಲ್ಲಿ ಬಳಸಿಕೊಂಡಿರುತ್ತಾರೆ. ಈ ಕೃತಿಯಲ್ಲಿ ಸ್ಥಳನಾಮಗಳು ತಮಿಳು ಪರಿಸರದೇ ಆಗಿವೆ. ಅನೇಕ ಕಥೆಗಳಲ್ಲಿ ಬರುವ ಶಬ್ಧಗಳು ತಮಿಳು ಪ್ರಭಾವದಿಂದ ಕೂಡಿವೆ. ಆದರೂ ಸ್ವಾಮಿಯವರು ಹಲವು ಕನ್ನಡದ ಪರಿಸರದ ಶಬ್ಧಗಳನ್ನು ಇಲ್ಲಿ ಬಳಸಿದ್ದು ಕಾಣುತ್ತೇವೆ. ಕವಿತೆಗಳಲ್ಲಿ ಕೆಲವು ಕನ್ನಡಕ್ಕೆ ಅನುವಾದಿಸಿ ಕನ್ನಡ ರೂಪದಲ್ಲಿ ದಾಖಲಿಸಿದ್ದರೆ ಕೆಲವು ತಮಿಳು ರೂಪದಲ್ಲಿಯೇ ದಾಖಲಿಸಿದ್ದು ಕಾಣಬಹುದು.

ಬಂಡಿಗಾರ, ಬಂಡಿ, ಕವಿರಾಯ ಎಂಬ ಅಚ್ಚ ದೇಶೀಯ ಪದದ ಬಳಕೆಯೊಂದಿಗೆ ಅಲ್ಲಲ್ಲಿ ತಮಿಳು ಭಾಷಿಕ ಪರಿಸರದ ಶಬ್ಧಗಳು ಕಾಣುತ್ತವೆ. ತೇನ್, ಕುಳಕ್, ಪಣ್ಯಾರ ಮುಂತಾದ ತಿಂಡಿಗಳ ಶಬ್ಧಗಳು ಕನ್ನಡದಲ್ಲಿ ಅನುವಾದಿಸಿ ಕೊಟ್ಟಿರುವರು. ಒಟ್ಟಿನಲ್ಲಿ ಕೃತಿಯು ಗ್ರಂಥಸ್ಥರೂಪದ ಕನ್ನಡ ಭಾಷೆಯಲ್ಲಿ ಮೂಡಿಬಂದಿದ್ದು ಕಾಣಬಹುದು.

"ತಹಶೀಲ್ದಾರನ ಕಾಗದವನ್ನ ಕಂಡು ಕಲೆಕ್ಟರ್ ಲಾಲ್ಗುಡಿಗೆ ಬಂದು ಮೊಕ್ಕಾಂ ಮಾಡಿದ. ಆತನೊಬ್ಬ ಬಿಳಿಯವ."[೯]

ಮೇಲಿನ ವಾಕ್ಯವು ಸಂಪೂರ್ಣವಾಗಿ ಆಡು ಭಾಷೆ ರೂಪದಲ್ಲಿಯೇ ಸ್ವಾಮಿಯವರು ತಂದಿರುವುದು ಕಾಣುತ್ತದೆ. ಕನ್ನಡದ ಕಾದಂಬರಿ, ಕಥೆಗಳಲ್ಲಿರುವ ಸಂಭಾಷಣೆಯ ರೂಪದ ಸಂಪೂರ್ಣ ಕೃತಿಯಂತೆ ಮೂಡಿಬಂದಿದೆ. ಕನ್ನಡದ್ದೇ ಕೃತಿಯೆಂಬಂತೆ ಭಾಷಿಕವಾಗಿ ಕಾಣುತ್ತದೆ. ಪ್ರತಿಯೊಂದು ಸಂದರ್ಭ. ಸನ್ನಿವೇಶಗಳು ಕನ್ನಡ ಜಾಯಾಮಾನಕ್ಕೆ ತಕ್ಕಂತೆ ಸ್ವಾಮಿಯವರು ಭಾಷಾಂತರಿಸಿದ್ದು ಕಾಣುತ್ತದೆ.

ಬಿ.ಜಿ.ಎಲ್. ಸ್ವಾಮಿಯವರು ಈ ಕೃತಿಯಲ್ಲಿ ಗ್ರಂಥ ಸಂಪಾದನೆ, ಕವಿ ಕಥೆ, ಕಥಾನಕ, ಸಂಗೀತಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ದಕ್ಷಿಣ ಭಾರತದ ಸಂಸ್ಕೃತಿಯ ಕುರುಹುಗಳು ಸ್ವಾಮಿನಾಥನ್ ಅಯ್ಯರ್ ಅವರು ಚಿತ್ರಿಸಿದ ರೂಪಿದಲ್ಲಿಯೇ ಕನ್ನಡಕ್ಕೆ ತಂದಿದ್ದಾರೆ. ಕಥೆಗಳಲ್ಲಿ ಶೈವ ವೈಷ್ಣವ ಪಂಥಗಳ ಬಗ್ಗೆ ಹೇಳುವ ಪರಿಯು ಭಾರತೀಯ ಸಂಸ್ಕೃತಿಯ ನೆಲೆಯ ಪ್ರಭಾವಕ್ಕೆ ಒಳಗಾಗಿರುವುದು ಕಾಣುತ್ತೇವೆ.

ಮೂಢನಂಬಿಕೆಗಳ ಹೋಗಲಾಡಿಸುವ ದೆಸೆಯಲ್ಲಿ ಸ್ವಾಮಿನಾಥನ್ ಅಯ್ಯರ್ ಅವರು ನೀಡಿದ ಕಥನ ಸ್ವಾಮಿಗಳು ಸ್ವಾಮಿಯವರು ಕನ್ನಡ ಸಂದರ್ಭಕ್ಕೆ ಅನುಗುಣವಾಗಿ ಭಾಷಾಂತರಿಸಿದ್ದಾರೆ. ಬಿ.ಜಿ.ಎಲ್. ಸ್ವಾಮಿಯವರು ವೈಚಾರಿಕ ಚಿಂತನೆಯೇ ಪ್ರಭಾವ ಭಾಷಾಂತರ ಕೃತಿಯಲ್ಲಿ ಕಾಣಬಹುದು.

ವೈದಿಕ ಸಂಸ್ಕೃತಿಯನ್ನು ವಿಮರ್ಶಾತ್ಮಕ ನೆಲೆಗಟ್ಟಿನಲ್ಲಿ ಬಿಂಬಿಸಿದ್ದು ಕಾಣಬಹುದು. ಹರದತ್ತರ ಶಿವಭಕ್ತಿ ಎಂಬ ಕಥೆಯಲ್ಲಿ "ಆ ಸಮಯದಲ್ಲಿ ಒಂದು ನಾಯಿ ಒಳಗೆ ಬಂದು ಪಾತ್ರೆಯಲ್ಲಿದ್ದ ಅಭಿಷೇಕ ತೀರ್ಥವನ್ನು ನೆಕ್ಕತೊಡಗಿತು. ಹರದತ್ತರು ಕಣ್ತೆರೆದು ನೋಡಿದರು. ನಾಯಿಯು ಅಭಿಷೇಕ ತೀರ್ಥವನ್ನು ಎಂಜಲಿಡುವುದನ್ನು ಕಂಡರು. ಅವರು ಅದನ್ನು ಓಡಿಸಲಿಲ್ಲ."[೧೦]

ಇಂತಹ ಸನ್ನಿವೇಶಗಳಲ್ಲಿ ಮಾನವೀಯತೆಯ ಮುಖಗಳು ಕಥೆಯಲ್ಲಿ ನಿರೂಪಿತವಾಗಿದ್ದು ಕಾಣಬಹುದು. ಈ ಕೃತಿಯು ಮೂಢನಂಬಿಕೆಯ ಆಚೆಯ ಭಾರತೀಯ ಸಂಸ್ಕೃತಿಯನ್ನು ಅದರಲ್ಲೂ ದಕ್ಷಿಣ ಭಾರತದ ಸಂಸ್ಕೃತಿಯನ್ನು ಬಿಂಬಿಸುತ್ತದೆ. ಮೂಲಕೃತಿಯ ಆಶಯಕ್ಕೆ ಧಕ್ಕೆಯಾಗದ ರೀತಿಯಲ್ಲಿ ಡಾ. ಬಿ.ಜಿ.ಎಲ್. ಸ್ವಾಮಿಯವರು ಭಾಷಾಂತರಿಸಿದ್ದಾರೆ.

**ಜ್ಞಾನರಥ**

ಜ್ಞಾನರಥ ಕೃತಿಯು ಭಾಗ-೧ರಲ್ಲಿ ನೀಳ್ಗತೆಗಳು ಮತ್ತು ಭಾಗ-೨ ಕಿರುಕತೆಗಳಿಂದ ಕೂಡಿದ್ದು ನೀಳ್ಗತೆಗಳು ಕಲ್ಪನೆಯ ಕಥೆಯ ರೂಪದಲ್ಲಿ ಸಾಗುವ ಈ ಸಣ್ಣಕಥೆಗಳಿಗೆ ಒಂದೊಂದು ಕತೆಗೂ ಒಂದೊಂದು ವಿಶಿಷ್ಟ ಹಣೆಪಟ್ಟಿ ನೀಡಲಾಗಿದೆ. ವಿಭಾಗದಲ್ಲಿರುವವರು ಕಥೆಗಳು, ಜಾನಪದ ಕಲೆಗಳ ರೂಪದಲ್ಲಿವೆ. ಸುಬ್ರಹ್ಮಣ್ಯ ಭಾರತೀಯವರ ಮೂಲಕೃತಿಯ ಆಶಯದಂತೆ ಡಾ. ಬಿ.ಜಿ.ಎಲ್. ಸ್ವಾಮಿಯವರು ಕನ್ನಡಕ್ಕೆ ಜ್ಞಾನರಥ ತಂದಿದ್ದಾರೆ. ತಮಿಳು ಪ್ರಭಾವದ ವೀರಳತೆಯಿಂದ ಈ ಕೃತಿಯು ಕೂಡಿದ್ದು ಇದರಲ್ಲಿ ಡಾ. ಬಿ.ಜಿ.ಎಲ್.ಸ್ವಾಮಿಯವ ವ್ಯಂಗ್ಯ, ವಿಡಂಬನೆ, ಹಾಸ್ಯದ ಸೊಗಸು ಲೇಪಿತಗೊಳಿಸಿ ಬೆರೆಸಿದ್ದು ಕಾಣಬಹುದು.

ಜ್ಞಾನರಥ ಕೃತಿಯು ಸಾಹಿತ್ಯಿಕವಾಗಿ, ಭಾಷಿಕವಾಗಿ, ಸಾಂಸ್ಕೃತಿಕವಾಗಿ ಕನ್ನಡದಲ್ಲಿ ಮೂಡಿಬಂದ ಶ್ರೇಷ್ಠ ಗದ್ಯ ಲೇಖಕ ಸ್ವಾಮಿಯವರ ಭಾಷಾಂತರದ ಈ ಕೃತಿಯ ಸಾಹಿತ್ಯಿಕ, ಸಂಸ್ಕೃತಿ, ಭಾಷಿಕ ಸ್ವರೂಪವನ್ನು ಕಂಡುಕೊಳ್ಳುವುದು ವಿಶೇಷವಾಗಿದೆ.

ಸಾಹಿತಿಕವಾಗಿ ಈ ಕಥಾ ಸಂಕಲನವು ಕನ್ನಡ ಸಂದರ್ಭಕ್ಕೆ ಅನುಗುಣವಾಗಿ ಕನ್ನಡ ಪಂಚತಂತ್ರ ಕಥೆಯ ರೂಪದಲ್ಲಿ ಇಲ್ಲಿ ಅನುವಾದಿಸಲಾಗಿದೆ. ಪ್ರತಿ ಕಥೆಯೋ ಪ್ರಾರಂಭಿಕವಾಗಿ ಪೀಠಿಕೆಯ ರೂಪದ ನೇರ ಸನ್ನಿವೇಶ ಸೃಷ್ಟಿಸುತ್ತಾ ಕಥೆಗಾರ ಸಾಗುತ್ತಾನೆ. ಹಾಗೇ ರಸವತ್ತಾದ ಮಾತುಗಳಿಂದ ಕೂಡ ಪ್ರಾರಂಭವಾಗುತ್ತದೆ. "ಈ ಕ್ಷಣವೇ ನನ್ನನ್ನು ದುಃಖವಿಲ್ಲದ ಭೂಮಿ ಎಲ್ಲಿಯಾದರೂ ಇರುವುದಾದರೆ, ಅಲ್ಲಿಗೆ ಕೊಂಡುಹೋಗು ಜ್ಞಾನರಥ"[೧೧] ಎಂಬ ಮಾತುಗಳು ಕಥೆಯ ಆರಂಭಕ್ಕೆ ಸೌಂದರ್ಯ ಒದಗಿಸುತ್ತವೆ



"ಈ ಇನಿಯ ಕಾಂತಿ ನನ್ನನ್ನು ಪರವಶಮಾಡಿಸುತ್ತದೆಲ್ಲ. ಅದೆಲ್ಲಿಂದ ಬರುತ್ತದೆ?" ಎಂದೆ. "ಮೇಲೆ ನೋಡು" ಎಂದಳು. ನೀಲ ಬಾನಿನಲ್ಲಿ ಚಂದ್ರನು ತಾರೆಗಳಾಡಗೂಡಿ ವೈಭವದಿದ್ದುದನ್ನು ಕಂಡೆ."[೧೨] ಇಂತಹ ಸಂಭಾಷಣೆಯು ಕಾವ್ಯಮಯವಾದ ರೀತಿಯಲ್ಲಿ ಸಾಹಿತ್ಯಿಕ ಭಾಷೆಯಲ್ಲಿ ನಾಟಕೀಯ ರೂಪದ ಸಾಹಿತ್ಯದ ಸೃಷ್ಟಿಯಾಗಿದ್ದು ಈ ಕಥೆಗಳಲ್ಲಿ ಕಾಣಬಹುದು.

ಪ್ರತಿಯೊಂದು ಕಥೆಯು ನಿರೂಪಕ ನಿರೂಪಿಸುತ್ತಾ ಸಾಗುತ್ತಾ ಪಾತ್ರ, ಸನ್ನಿವೇಶದ ಪರಿಚಯ ನೀಡುತ್ತಾನೆ. ಕೆಲವೊಂದು ಕಡೆ ನಿರೂಪಕನೇ ಪಾತ್ರಧಾರಿಯಾಗಿ ಮೂಡಿಬಂದಿದ್ದು ಕಾಣುತ್ತೇವೆ. ಜ್ಞಾನರಥ ಕೃತಿಯನ್ನು ಡಾ. ಬಿ.ಜಿ.ಎಲ್. ಸ್ವಾಮಿಯವರು ಕನ್ನಡ ಸಾಹಿತ್ಯಿಕ ಪರಿಸರಕ್ಕೆ ಪರಿಪೂರ್ಣವಾಗಿ ತಂದಿದ್ದಾರೆ.

ಭಾಷಿಕವಾಗಿ "ಡಾ. ಬಿ.ಜಿ.ಎಲ್. ಸ್ವಾಮಿಯವರು ಆಡುಭಾಷೆ ಮತ್ತು ಗ್ರಂಥಿಕ ಭಾಷೆಯ ಸ್ವರ್ಶವನ್ನು ಸಂದರ್ಭಕ್ಕೆ ಅನುಗುಣವಾಗಿ ಬಳಸಿಕೊಂಡಿರುವರು. ಆ ಹಜಾರಕ್ಕೆ ತೆಂಕಣ ದಿಕ್ಕಿನಲ್ಲಿ ಒಂದು ಕೈಸಾಲೆ, ಇದು ಮೂಬಂದಿ, ಹಿಂಬದಿಯಲ್ಲಿ ಕೆಲವು ಕೋಣೆಗಳು"[೧೩] ಮೃತ್ಯುಕಾಲೀತ ಕಥೆಯಲ್ಲಿ ಮನೆಯ ಪರಿಚಯ ನೀಡುತ್ತಾ ಹಿಂಬದಿ–ಮುಂಬದಿ ಎಂಬ ಸರಳ ಭಾಷೆಯನ್ನು ಬಳಸಿದ್ದು ಕಾಣುತ್ತೇವೆ.

"ಅದೇನು ಸ್ವಾಮಿ"[೧೪] ಈ ಶಬ್ಧವು ಕನ್ನಡ ಪರಿಸರದ ಸ್ವಷ್ಟವಾದ ಶಬ್ಧ ಡಾ. ಬಿ.ಜಿ.ಎಲ್. ಸ್ವಾಮಿಯವರು ಇಂತಹ ಶಬ್ದಗಳ ಬಳಕೆಯಿದೆ. ಕೃತಿಯಲ್ಲಿ ಗ್ರಂಥಸ್ಥ ಭಾಷೆಯು ಪ್ರಧಾನ ಪಾಲು ಪಡೆದಿದೆ. ಅಲ್ಲಿ ಸಂಭಾಷಣೆಯಲ್ಲಿ ಸರಳವಾದ ದಿನನಿತ್ಯದ ಭಾಷೆಯನ್ನು ಬಳಸಿರುವರು. ಒಟ್ಟಿನಲ್ಲಿ ಭಾಷಿಕವಾಗಿ ಕನ್ನಡತನದ ವಿಷಯ ವಸ್ತು ಒಳಗೊಂಡಿದೆ ಎಂಬಂತೆ ಈ ಕೃತಿಯನ್ನು ಡಾ. ಬಿ.ಜಿ.ಎಲ್. ಸ್ವಾಮಿಯವರು ಕನ್ನಡಕ್ಕೆ ಅನುವಾದಿಸಿರುವರು.

ಸಾಂಸ್ಕೃತಿಕವಾಗಿ ಜ್ಞಾನರಥ ಕೃತಿಯನ್ನು ಅನುವಾದಿಸಿದಾಗ ಮೊದಲ ಭಾಗದಲ್ಲಿ ಜ್ಞಾನರಥವೇರಿ ಹೊರಡುವ ಪ್ರಯಾಣವು ಉಪಶಾಂತಿ ಲೋಕ, ಗಂಧರ್ವ ಲೋಕ, ಸತ್ಯಲೋಕ, ಮೃತಿಕಾ ಲೋಕ ಧರ್ಮ ಲೋಕಗಳು ವೈದಿಕ ಪರಂಪರೆಯ ನಂಬಿಕೆಯ ಲೋಕದ ಸಂಚಾರ ಅಲ್ಲಿನ ಘಟನೆಗಳು ಹಿಂದೂ ಧರ್ಮದ ಸಂಸ್ಕೃತಿಯ ಪ್ರತೀಕವಾಗಿ ಕಾಣುತ್ತದೆ.

ವೈದಿಕ ಧರ್ಮದ ವಿಮರ್ಶಾತ್ಮಕ ನೋಟವನ್ನು ಮೂಢನಂಬಿಕೆ ಕಂದಚಾರದ ಹೊರಗಿನ ವೈಚಾರಿಕ ವಾಸ್ತವ ನಿಲುವನ್ನು ಲೇಖಕ ಪ್ರತಿಪಾದಿಸುತ್ತಾರೆ.

"ನಮ್ಮ ಶಾಸ್ತ್ರಗಳೆಲ್ಲ ಗೆದ್ದಲು ಹಿಡಿದುಹೋಗಿವೆ. ದೇಶದ ಜ್ಞಾನ ಕಣಜಕ್ಕೆ ಕಾವಲಿಗರಾಗಿದ್ದ ಬ್ರಾಹ್ಮಣರು ಈಚೆಗೆ ಮೂಡ ಕಪ್ಪೆಗಳಂತೆ ಕೆಲವು ಮಂತ್ರಗಳನ್ನು ಸಂಬಂಧವಿದ್ದಂತೆ ಯಾವೊಂದರ ಅರ್ಥವನ್ನು ಅರಿಯದೇ, ಅರಚುತ್ತಾರೆಯೇ ವಿನಾ ನಿಜವಾದ ಜ್ಞಾನಹಿರಿಮೆ ಇವರಿಗೆ ಲವಲೇಷವೂ ಇಲ್ಲದೆ ಹೋಗಿಬಿಟ್ಟಿತು."[೧೫]

ಕಥೆಯ ವಿವರಣೆಯಲ್ಲಿ ಗಂಧರ್ವಲೋಕದ ಬಗ್ಗೆ ಹೇಳುವಾಗ ಭೂಲೋಕದಿ ವಾಸ್ತಾವಿಕ ವಿಚಾರಗಳನ್ನು ಹೇಳುತ್ತಾ ಬ್ರಾಹ್ಮಣರು ಜ್ಞಾನದ ಕಣಜದ ಕಾವಲುಗಾರರಿದ್ದರು. ಆದರೆ ಅವರು ಮೂಢ್ಯತೆಯಲ್ಲಿ ಇರುವರು ಎಂದು ಹೇಳುತ್ತಾರೆ.

ಧರ್ಮ ನಿರಪೇಕ್ಷವಾದ ವೈಚಾರಿಕ ಸಂಸ್ಕೃತಿಯನ್ನು ಬಿಂಬಿಸಲು ಇಲ್ಲಿ ಲೇಖಕರು ಶ್ರಮಪಟ್ಟಿರುವುದು ಕಾಣಬಹುದು. ಎಲ್ಲಾ ಜಾತಿ-ಧರ್ಮಗಳು ದಿಕ್ಕು ಭಾರತವೆಲ್ಲ ಒಂದೇ ಜಾತಿಯೆಂತಲು ಎಂದು 'ಉಪಕರ್ಮ' ಎಂಬ ಕಥೆಯಲ್ಲಿ ಹೇಳುವ ಮೊದಲ ವೈಚಾರಿಕ ಸಂಸ್ಕೃತಿಯನ್ನು ಬಿಂಬಿಸುತ್ತದೆ.

'ಹಿಂದೂಗಳ ಹಾಗೆಯೇ ಇರೋಣ"!

ಎಂದು ನಾನು ಹೇಳಿದೆ

ಯಾವಾಗಲೂ ವಿಭಜನೆಯ ಜಗಳವಿರಬೇಕೆಂದು ನಿಮ್ಮ ಪಕ್ಷವೋ?

"ಬೇಕಾದವರು ಜನಿವಾರ ಹಾಕಿಕೊಳ್ಳಬಹುದು. ಅದು ಆ ಕಾಲದಲ್ಲಿ ಯಾಗಕ್ಕೆ ಹೊರಗುತಾಗಿ ಏರ್ಪಟ್ಟಿತು. ಇಷ್ಟವಿದ್ದ ಹಿಂದುಗಳೆಲ್ಲ ಜನಿವಾರ ಹಾಕಿಕೊಳ್ಳಬಹುದು. ಉಳಿದವರು ಸರಿಸಮವಾಗಿರಬಹುದು. ಜನಿವಾರವಿದ್ದರೂ ಒಂದೇ ಇಲ್ಲದಿದ್ದರೂ ಒಂದೇ, ಹಿಂದೂಗಳೆಲ್ಲರೂ ಒಂದೇ ಕುಟುಂಬದವರು. ಪ್ರೀತಿಯ ತಾರಕ ಎಂದೇ"[೧೬] ಕಥೆಯಲ್ಲಿ ಇಂಥಹ ಸನ್ನಿವೇಶಗಳು ವೈಚಾರಿಕ ಸಂಸ್ಕೃತಿಯನ್ನು ಹಿಂದೂಗಳಲ್ಲಿ ಒಂದೇ ಎಂಬ ಭಾವನೆಯನ್ನು ಮೂಡಿಸುವ ಕಥೆಗಳು ನೀತಿ ಕಥೆಗಳಂತೆ ಕಾಣುತ್ತವೆ. ಡಾ. ಬಿ.ಜಿ.ಎಲ್. ಸ್ವಾಮಿಯವರು ವೈಚಾರಿಕ ನಿಲುವಿನ ವ್ಯಕ್ತಿತ್ವದ ಕುರುಹುಗಳು ಈ ಭಾಷಾಂತರ ಕೃತಿಗೆ ಪರೋಕ್ಷವಾಗಿ ಬೆಂಬಲವಾಗಿದೆ. ಒಟ್ಟಿನಲ್ಲಿ ಜ್ಞಾನರಥವು ಸಾಂಸ್ಕೃತಿಕವಾಗಿ ಕಲ್ಪನೆಯ ಕಥೆಗಳಲ್ಲಿ ವೈಚಾರಿಕತೆಯನ್ನು ಬಿಂಬಿಸುತ್ತದೆ.

ಡಾ. ಬಿ.ಜಿ.ಎಲ್. ಸ್ವಾಮಿಯವರು ಕನ್ನಡದ ನೆಲೆಯಲ್ಲಿ ಜ್ಞಾನದ ರಥ ನಡೆದಿಯೆ ಬಾಳೌ ಕಾವೇರಿ, ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ ಇತರರ ಪ್ರಬಂಧಗಳು ಎಂಬ ಕೃತಿಯನ್ನು ರೂಪಾಂತರಿಸಿದ್ದಾರೆ. ಕನ್ನಡ-ತಮಿಳು-ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಿಕವಾದ ಏಕ್ಯತೆಯನ್ನು ಸಾಧಿಸಿದ್ದು ಕಾಣಬಹುದು. ಕನ್ನಡದ ಜಾಯಮಾನಕ್ಕೆ ತಕ್ಕಂತೆ ತಮ್ಮದೇ ಆದ ಶೈಲಿಯಲ್ಲಿ ಕೃತಿಗಳನ್ನು ರಚಿಸಿದ್ದು, ತಮಿಳುನಾಡಿನಲ್ಲಿ ಅವರು ವೃತ್ತಿಜೀವನ ಕಳೆದಿದ್ದು, ಮತ್ತು ಅವರ ತಮಿಳು ಸಾಹಿತ್ಯಿಕ ಜ್ಞಾನವನ್ನು ಕನ್ನಡಕ್ಕೆ ತಮ್ಮದೇಯಾದ ಶೈಲಿಯಲ್ಲಿ ಮೂಲಕೃತಿಯ ವಿಷಯ ವಸ್ತುಗಳೇ ಆಧಾರವಾಗಿ ರಚಿಸಿರುವರು.

ಈ ಮೂರು ಕೃತಿಗಳು ಕನ್ನಡ ಮತ್ತು ತಮಿಳು ಸಂಸ್ಕೃತಿಯ ಹಾಗೂ ಸಾಹಿತ್ಯಿಕ ಭಾಷಿಕವಾಗಿ ಸೇತುವೆಯಂತೆ ಕಾರ್ಯನಿರ್ವಸಿವೆ. ಕನ್ನಡ ಮತ್ತು ತಮಿಳು ಭಾಷೆಯ ಕೊಡುಕೊಳ್ಳುಗೆಗಳಲ್ಲಿ ಪ್ರಮುಖ ಪಾತ್ರ ವಹಿಸಿವೆ.

## ಕೊನೆಟಿಪ್ಪಣಿಗಳು

೧. ನಡೆದಿಯೆ ಬಾಳೌ ಕಾವೇರಿ, ಪುಟ–೦೩.

೨. ಅದೇ, ಪುಟ–೦೩.

೩. ಅದೇ, ಪುಟ–೫೨.

೪. ಅದೇ, ಪುಟ–೮.

೫. ಬೆಳುದಿಂಗಲ್ಲಿ ಅರಳಿದ, ಪುಟ–೯೪.

೬. ಅದೇ, ಪುಟ–೮೬

೭. ಅದೇ, ಪುಟ–೩೩

೮. ಅದೇ, ಪುಟ–೧೧೭

೯. ಅದೇ, ಪುಟ–೧೫೫

೧೦. ಅದೇ, ಪುಟ–೧೨೧

೧೧. ಜ್ಞಾನರಥ, ಪುಟ–೧೧೩

೧೨. ಅದೇ, ಪುಟ–೨೧

೧೩. ಅದೇ, ಪುಟ–೪೭

೧೪. ಅದೇ, ಪುಟ–೮೫

೧೫. ಅದೇ, ಪುಟ–೧೯

೧೬. ಅದೇ, ಪುಟ–೮೬.

## ಅಧ್ಯಾಯ ೫

# ದ್ರಾವಿಡ ಸಂಬಂಧಿ ಚಿಂತನೆಗಳು

ಡಾ. ಬಿ.ಜಿ.ಎಲ್. ಸ್ವಾಮಿಯವರು ದ್ರಾವಿಡ ಭಾಷೆ, ಸಾಹಿತ್ಯ, ಚರಿತ್ರೆ, ಸಂಸ್ಕೃತಿಯ ಬಗ್ಗೆ ಆಳವಾದ ಜ್ಞಾನ ಹೊಂದಿದ್ದರು. ತಮಿಳು–ಕನ್ನಡ, ಭಾಷಾ ಪಾಂಡಿತ್ಯರಾಗಿದಲ್ಲದೆ. ಅವರು ದ್ರಾವಿಡ ಭಾಷೆಗಳ ಇತಿಹಾಸ ಸಂಸ್ಕೃತಿ, ಸಾಹಿತ್ಯದ ಬೇರುಗಳ ಬಗ್ಗೆ ಗಾಢವಾದ ಅಧ್ಯಯನ ಮಾಡಿದ್ದರು. ಪ್ರಸ್ತುತ ಅಧ್ಯಾಯದಲ್ಲಿ ಡಾ. ಬಿ.ಜಿ.ಎಲ್. ಸ್ವಾಮಿಯವರು ದ್ರಾವಿಡ ಚಿಂತನೆಗಳ ಬಗ್ಗೆ ಚರ್ಚಿಸಿದ ವಿಷಯಗಳ ಮೇಲೆ ಬೆಳಕು ಚೆಲ್ಲುವುದು ಮಹತ್ವದ್ದಾಗಿದ್ದು. ಅವರು ವಿಮರ್ಶಾತ್ಮಕ ಹಾಗೂ ಸಕರಾತ್ಮಕವಾದ ಚಿಂತನೆಗಳ ನಿಂತ ನೆಲಗಟ್ಟಾದ ಸಂಸ್ಕೃತ, ಸಾಹಿತ್ಯ, ಐತಿಹಾಸ, ಧಾರ್ಮಿಕ ವಿಷಯ ವಸ್ತುವಿನ ಬಗ್ಗೆ ಚರ್ಚಿಸುವುದು ಅವಶ್ಯಕವಾಗಿದೆ.

ತಮಿಳು ತಲೆಗಳ ನಡುವೆ Chidambaram and nataraja problems and Rationalization ತೂಲ್ಕಪಿಯಯಂ ಕಾಲವಿಚಾರ, ತಮಿಳು ನಾಡಿನ ಕಾಳಮುಖರು, ತಮಿಳುನಾಡಿನ ಗೊಲಕೀ ಸಂಪ್ರದಾಯದ ಶೈವಮತ ಮೊದಲ ನಾಲ್ವರು ಸಮಯಾಚಾರ್ಯರು, ಕಳಭ್ರ ಇಂಟರೆಗ್ನೆಮ್, ಸಂಶೋಧನ ಲೇಖನಗಳು ಸ್ವಾಮಿಯವರಲ್ಲಿನ ದ್ರಾವಿಡ ಚಿಂತನೆಯನ್ನು ಪ್ರತಿಬಿಂಬಿಸುತ್ತವೆ.

ಈ ಲೇಖನಗಳಲ್ಲಿ ಮತ್ತು ಕೃತಿಗಳಲ್ಲಿ ದಕ್ಷಿಣ ಭಾರತದ ದ್ರಾವಿಡ ಭಾಷಾ ಸಂಸ್ಕೃತಿಯ ಬಗ್ಗೆ ಆಳವಾದ ಸಂಶೋಧನಾತ್ಮಕವಾದ ಆಧಾರಸಹಿತ ಚಿಂತನೆಗಳು ನೀಡಿದ್ದು, ಡಾ. ಬಿ.ಜಿ.ಎಲ್. ಸ್ವಾಮಿಯವರನ್ನು ಆಧುನಿಕ ದ್ರಾವಿಡ ಚಿಂತಕರನ್ನಾಗಿಸಿದೆ. ಸ್ವಾಮಿಯವರ ಸಂಶೋಧನಾತ್ಮಕ

ಅಧ್ಯಯನಗಳು ಪ್ರಾಸ್ತಾವಿಕ ನೆಲೆಗಟ್ಟಿನಲ್ಲಿ ರೂಪಗೊಂಡಿದ್ದು ಅವರ ವಿಚಾರ ಸರಣಿಯ ಕಂಡುಕೊಳ್ಳುವುದು ಅವಶ್ಯಕವಾಗಿದೆ. 'ತಮಿಳು ತಲೆಗಳ ನಡುವೆ' ಕೃತಿ ಆಧಾರಿಸಿ ಅವರ ಚಿಂತನೆಗಳನ್ನು ಕಂಡುಕೊಳ್ಳುವ ಪ್ರಯತ್ನ ಇದಾಗಿದೆ.

ಆಧುನಿಕ ಕಾಲಘಟ್ಟದಲ್ಲಿ ದ್ರಾವಿಡ ಚಿಂತನೆಯನ್ನು ಮಂಡಿಸಿದ ಮಹನೀಯರಲ್ಲಿ ಡಾ. ಬಿ.ಜಿ.ಎಲ್. ಸ್ವಾಮಿಯವರು ಕೂಡ ಒಬ್ಬರು. ದ್ರಾವಿಡ ಭಾಷೆ, ಸಾಹಿತ್ಯ, ಧಾರ್ಮಿಕ ವಿಚಾರಗಳನ್ನು ವೈಜ್ಞಾನಿಕ ರೀತಿಯಲ್ಲಿ ಆಧಾರಸಹಿತವಾಗಿ ವಿಶ್ಲೇಷಣಾತ್ಮಕವಾಗಿ ಚರ್ಚಿಸಿದ್ದು ಕಾಣಬಹುದು. ದ್ರಾವಿಡ ಚಿಂತನೆಗೆ ಕಾಲ್ಡ್‌ವೆಲ್‌ರು ಹಾಕಿದ ಆಸ್ತಿ ಭಾರದ ನೆಲೆಯಲ್ಲಿ ಹಲವು ದೇಶೀಯ ಚಿಂತಕರು ತಮ್ಮ ವಾದಗಳನ್ನು ಮಂಡಿಸಿದರು. ಅದರಲ್ಲಿ ಬಿ.ಜಿ.ಎಲ್. ಸ್ವಾಮಿಯವರು ತಮ್ಮದೇ ವಾಸ್ತವಿಕ ನೆಲೆಗಟ್ಟಿನಲ್ಲಿ ವಾಗ್ವಾದಗಳನ್ನು ವಿಶ್ಲೇಷಣೆ ಮಾಡಿದ್ದಾರೆ.

ತಮಿಳನ್ನು ಕೇಂದ್ರಿಕರಿಸಿ ಸ್ವಾಮಿಯವರು ಚರ್ಚಿಸಿದ ದ್ರಾವಿಡ ಭಾಷಿಕ, ಸಾಹಿತ್ಯಿಕ, ಸಾಂಸ್ಕೃತಿಕವಾದ ಅಂಶಗಳನ್ನು ಕಂಡುಕೊಳ್ಳುವ ಪ್ರಯತ್ನ ಇದಾಗಿದೆ.

**ಸಾಹಿತ್ಯಿಕ ವಿಚಾರಗಳು:**

ತಮಿಳು ಸಾಹಿತ್ಯ ಚರಿತ್ರೆಯ ಕುರಿತು ಇರುವ ವಾದಗಳಿಗೆ ಸ್ವಾಮಿಯವರು, ತಮ್ಮದೇ ಆದ ಆಧಾರ ಸಹಿತವಾದ ಚರ್ಚೆಯನ್ನು ಮುಂದಿಟ್ಟಿರುವರು. ಚಂಗ ಸಾಹಿತ್ಯದ ಕುರಿತು ಮತ್ತು ತಮಿಳು ಸಾಹಿತ್ಯದ ಕುರಿತು ಅವರ ನೀಡಿರುವ ವಿವರಣೆಗಳು ಈ ರೀತಿ ಇವೆ.

"೧೦ನೆಯ ಶತಮಾನದವರೆಗೂ ತಮಿಳು ಪಯಿರುಕಾಣದು. ಕಾರಣಗಳನ್ನು ಯಾರೂ ಹುಡುಕಿಕೊಂಡು ಹೋಗಿಲ್ಲ. ೧೦ನೆಯ ಶತಮಾನದಿಂದ ಈಚೆಗೆ ಕಾವ್ಯ, ನಿಘಂಟು, ವ್ಯಾಕರಣ, ಲಕ್ಷ್ಯಗ್ರಂಥ, ಪುರಾಣ, ಸ್ತೋತ್ರ ಮೊದಲಾದ ಸಾಹಿತ್ಯ ಪ್ರಕಾರಗಳ ವಿಫಲವಾದ ಬೆಳೆಯನ್ನು ಕಾಣುತ್ತೇವೆ."[೧]

೧೦ನೇ ಶತಮಾನದವರೆಗೆ ದ್ರಾವಿಡ ಭಾಷೆಗಳ ಸಾಹಿತ್ಯದ ವಿಫಲ ಬರಹ ಅಷ್ಟಾಗಿ ಕಾಣುವುದಿಲ್ಲ ಎಂದು ಹಾಗೂ ತಮಿಳು ಸಾಹಿತ್ಯ ಚರಿತ್ರೆಗೆ ಇರುವ ವಾದಗಳಾದ ಕ್ರಿ.ಪೂ.ದಲ್ಲಿ ತಮಿಳು ಸಾಹಿತ್ಯ ಚರಿತ್ರೆ ಉದಯಿಸಿದೆ ಎಂಬ ವಾದಕ್ಕೆ ಸ್ವಾಮಿಯವರು ೧೦ನೆಯ ಶತಮಾನದವರೆಗೂ ತಮಿಳು ಪರಿವಿದು ಕಾಣದು ಕಾರಣಗಳನ್ನು ಯಾರು ಹುಡುಕಿ ಇರುವುದಿಲ್ಲ ಎಂದು ಹೇಳುತ್ತಾರೆ. ದ್ರಾವಿಡ ಸಾಹಿತ್ಯದ ಸಮೃದ್ಧತೆಯು ೧೦ನೇ ಶತಮಾನದ ತರುವಾಯದ್ದು ಎಂದು ಸ್ವಾಮಿ ಚರ್ಚಿಸುತ್ತಾರೆ.

ಚಂಗ ಸಾಹಿತ್ಯವನ್ನು ಕುರಿತು ಸ್ವಾಮಿಯವರು ಈ ರೀತಿ ಚರ್ಚೆ ಮಾಡುತ್ತಾರೆ. "ಆಗ ಇದ್ದಕ್ಕಿದ್ದಂತೆಯೇ ಸಾಹಿತ್ಯದ ಉದಯವಾಯಿತು. ಈ ಸಾಹಿತ್ಯಕ್ಕೆ ತೋಲ್ ಕಾಪ್ಪಿಯಂ ಪ್ರೇರಕವಾಯಿತೆ ಅಥವಾ ಬೇರಾವುದಾದರೂ ಕಾರಣಗಳು ಸ್ಫೂರ್ತಿಯನ್ನು ಒಡ್ಡಿದಿವೆ ಎಂಬುದೂ ತಿಳಿಯದು. ಹೀಗೆ ಉದಯವಾದ ಸಾಹಿತ್ಯ ಕ್ರಿ.ಶ. ೩ನೇ ಶತಮಾನದವರೆಗೂ ಬೆಳೆದುಬಂತು. ಇದೇ 'ಚಂಗ' ಸಾಹಿತ್ಯ"[೨] ಸಾಹಿತ್ಯಕ್ಕೆ ಪ್ರೇರಣೆಯಾಗಿವೆ? ಚಂಗ ಸಾಹಿತ್ಯದ ಕುರಿತು ವಿಮರ್ಶಾತ್ಮಕವಾಗಿ ೧ನೇ ಶತಮಾನದಲ್ಲಿ ಎಂದು ತಮಿಳು (ಕಲವರೂ) ಹೇಳುವ ತೊಲ್ಕಾಪಿಯಂ ಚಂಗ ಸಾಹಿತ್ಯಕ್ಕೆ ಪ್ರೇರಣೆಯಾದವೆ? ಎಂಬ ಚರ್ಚೆಯಾತ್ಮಕವಾಗಿ ಪ್ರಶ್ನಿಸುತ್ತಾರೆ.

ಮೂರು ಚಂಗಗಳ ಕುರಿತು ತಮಿಳರ ನಂಬಿಕೆಗಳ ಕುರಿತು ಸ್ವಾಮಿಯವರು ಮೂರು ಚಂಗಗಳ ಕುರಿತು ಹೀಗೆ ಹೇಳುತ್ತಾರೆ.

"ಪಾಂಡ್ಯ ಅರಸರು ಮೂರು ಚಂಗಗಳನ್ನು ಸ್ಥಾಪಿಸಿದರು. (ಮೊದಲನೆಯದು) ತಲೈಚಂಗ, (ಎರಡನೆಯದು) ನಡುಚಂಗ, (ಮೂರನೆಯದು) ಕಡೆಚಂಗ. ದಕ್ಷಿಣ ಮಧುರೆ(ಯಾವಾಗಲೂ ಎಲ್ಲಿಯೂ ಇದ್ದು ನೀರಿನಲ್ಲಿ ಕೊಚ್ಚಿಹೋದ ಭೂಭಾಗ ಈಗಿರುವ ಮಧುರೆಯಿಂದ ಭಿನ್ನ)ಯಲ್ಲಿ ಮೊದಲನೆತಮಿಳು ಚಂಗ ಸ್ಥಾಪಿತವಾಯಿತು. ಶಿವ, ಷಣ್ಮುಖ, ಕುಬೇರ ಮೊದಲಾದ ದೇವತೆಗಳನ್ನು ಒಳಗೊಂಡ ೫೪೯ ಪ್ರತಿಭಾನ್ವಿತರು ಈ ಚಂಗದ ಸಹಸ್ಯರಾಗಿದ್ದರು. ಇವರಲ್ಲಿ ಅಗಸ್ತ್ಯ ಮಂಜಿಯೂರಿನ ಮುಡಿನಾಗರಯ ಮೊದಲಾದ ಸಾಹಿತ್ಯ ಪಟ್ಟು ಗಳಿಸಿದ್ದರು. ಈ ಚಂಗ ೪೪೪೦ ವರ್ಷಗಳು ಊರ್ಜಿತವಾಗಿತ್ತು. ಒಬ್ಬರಾದ ಮೇಲೊಬ್ಬರಾಗಿ ೮೯ ಪಾಂಡ್ಯ ಅರಸರ ಆಶ್ರಯದಲ್ಲಿ ೪೪-೪೯ ಕವಿಗಳು ಕೃತಿ ರಚನೆ ಮಾಡಿದರು. ಈ ಭೂಪ್ರದೇಶವನ್ನು ಕಡಲ ನೀರು ಕೊಚ್ಚಿಕೊಂಡು ಹೋಯಿತು. ಇದರ ಪರಿಣಾಮವಾಗಿ ತಮಿಳು ಸರ್ವಸ್ವವೂ ನಾಶವಾಗಿಬಿಟ್ಟರೆ ಹರಕು-ಮುರುಕು ಏನಾದರೂ ಮೀಯಿತೆ ಎನ್ನುವುದು ಮಾತ್ರ ಗೊತ್ತಿಲ"[೩]

ಮೊದಲನೆಯ ಚಂಗ ಸಾಹಿತ್ಯದ ಕುರಿತು ತಮಿಳರಿಗೆ ಇರುವ ಕಲ್ಪನೆಯನ್ನು ಸ್ವಾಮಿಯವರು ವಿವರಿಸುತ್ತಾರೆ. ಯಾವುದೇ ಆಧಾರಗಳು ಇಲ್ಲದೇ ಮೊದಲ ಚಂಗದೇವ ಮಾನವರುಗಳಿಂದ ಸ್ಥಾಪಿತವಾಯಿತು. ಮತ್ತು ಅದು ಸಮುದ್ರದ ಅಲೆಗಳಿಂದ ಆ ಭೂಪ್ರದೇಶ ಕೊಚ್ಚಿ ಹೋಯಿತು. ಇದರಿಂದ ಸಾಹಿತ್ಯವೂ ನಾಶವಾಗಿಬಿಟ್ಟಿತು, ಎಂದು ತಮಿಳರು ವಾದಿಸುವ ಬಗೆಯನ್ನು ಸ್ವಾಮಿಯವರು ವ್ಯಂಗ್ಯವಾಗಿ ಬರೆಯುತ್ತಾರೆ.

ಎರಡನೆಯ ಮತ್ತು ಮೂರನೆಯ ಚಂಗ ಕುರಿತು ತಮಿಳರಲ್ಲಿ ಬೇರೂರಿರುವ ಭಾವನೆಗಳು, ನಂಬಿಕೆಗಳ ಬಗ್ಗೆ ಸ್ವಾಮಿಯವರು ಈ ರೀತಿ ಬರೆಯುತ್ತಾರೆ.

"ಕಪಾಟಮರ ಎಂಬ ಸ್ಥಳದಲ್ಲಿ ಎರಡನೆ ಚಂಗ ಸ್ಥಾಪಿತವಾಯಿತು. ಈ ಚಂಗದಲ್ಲಿ ಅಗಸ್ತ್ಯವೆಂಬ ಹೆಸರಿನವನೊಬ್ಬನಿದ್ದಾನೆ. (ಇವನು ಮೊದಲನೆ ಚಂಗದಲ್ಲಿದ್ದ ಅಗಸ್ತ್ಯನೇ. ಅವನಿಂದ ಭಿನ್ನನೋ ತಿಳಿಯದು) ಜೊತೆಗೆ ತೊಲ್‌ಕಾಪ್ಪಿಯನಾರ್, ಮೋಶಿ, ಕರಂದೆಯ ಅರಸು, ತುವರೆಯ ಅರಸು ಮೊದಲಾದ ೫೯ ಜನ ಪ್ರತಿಭಾನಿವತರು ಇದರ ಸದಸ್ಯರು ೩೭೦೦ ವರ್ಷ ಊರ್ಜಿತವಾಗಿತ್ತು. ಅದೇ ಸಂಖ್ಯೆಯ ಕವಿಗಳು ಕೃತಿ ರಚನೆ ಮಾಡಿದರು. ೫೯ ಜನ ಅರಸರು ಆಶ್ರಯವಿತ್ತರು."[೪]

ಎರಡನೆಯ ಚಂಗದ ಕುರಿತು ತಮಿಳು ಚರಿತ್ರೆಕಾರರ ಅಭಿಪ್ರಾಯಗಳು ಸ್ವಾಮಿಯವರು ಪ್ರಶ್ನೆಯ ರೂಪದಲ್ಲಿ ಎತ್ತಿಕೊಂಡು ಎರಡನೆಯ ಚಂಗದಲ್ಲಿಯೋ ಕೂಡ ಅಗಸ್ತ್ಯನ ಹೆಸರು ಪ್ರಸ್ತಾಪ ಮಾಡಿರುವರು. ಇತನು ಮೊದಲನೆಯ ಚಂಗದವನ್ನು ಅಥವಾ ಭಿನ್ನವೇ ಎಂದು ಚರ್ಚೆ ಮಾಡುತ್ತಾ, ೨ನೇ ಚಂಗದಲ್ಲಿ ಇದ್ದರು ಎಂದು ಹೇಳಲಾಗುವ "ತೊಲ್‌ಕಾಪ್ಪಿಯನಾರ್, ಮೊಶಿ, ಕರೆಂದೆಯೆ ಅರಸರು, ತುರಿವರೆಯ ಅರಸು ಇದ್ದರು" ಎಂಬ ಹೇಳಿಕೆಗಳ ಕುರಿತು ಸ್ವಾಮಿಯವರು ವಿವರಿಸುತ್ತಾರೆ.

ಮೂರನೆಯ ಚಂಗದ ಕುರಿತು ಇರುವ ಅಭಿಪ್ರಾಯಗಳ ಬಗ್ಗೆ ಹೀಗೆ ಹೇಳುತ್ತಾರೆ. "ಕಪಾಟಪುರವೂ ದಕ್ಷಿಣ ಮಧುರೆಯಂತೆ ಕಡಲ ಹೊಟ್ಟೆಯೊಳಗೆ ಅಡಗಿತು. ತಮಿಳು ಕುಲ ಇನ್ನೂ ಉತ್ತರ ದಿಕ್ಕಿಗೆ ಸರಿದು ಈಗಿನ ಮಧುರೆಯಲ್ಲಿ ವಲಸೆ ಹೂಡಿತು. ಇದೇ ಮೂರನೇ ಚಂಗ, ಅಥವಾ ಕಡೆಯ ಚಂಗ. ಇದರಲ್ಲಿ ೪೯ ಜನ ಸದಸ್ಯರಿದ್ದ ೪೪೯ ಕವಿಗಳು ಕೃತಿ ರಚನೆ ಮಾಡಿದರು. ಈ ಚಂಗ ೧೮೫೦ ವರ್ಷಗಳು ಊರ್ಜಿತವಾಗಿತ್ತು. ಅಹನಾನೂರು, ಪುರನಾನೂರು, ಕುರುಂತೊಗ್ಯೆ ಮೊದಲಾದ ಗ್ರಂಥಗಳ ಹುಟ್ಟಿದ್ದು. ಈ ಕಾಲದಲ್ಲಿ ಒಬ್ಬರಾದ ಮೇಲೋಬ್ಬರಂತೆ ೪೯ ಪಾಂಡ್ಯ ಅರಸರು ಪೋಷಕರಾಗಿದ್ದರು"[೫] ಎಂಬ ತಮಿಳು ಚರಿತ್ರೆಕಾರರು ಬರೆದಿರುವ ಕುರಿತು ಸ್ವಾಮಿಯವರು ವೆಂಕಟಸ್ವಾಮಿ ಎಂಬ ತಮಿಳು ಪಂಡಿತರೊಂದಿಗೆ ಚಂಗ ಕಾಲದ ಕಾಲಾನುಕ್ರಮಣಿಕೆಯು ಕಲ್ಪನೆಯಿಂದ ಕೂಡಿದ್ದು, ವಾಸ್ತವ ಅಂಶಗಳು ಇಲ್ಲ ಎಂದು ವಾದಿಸುತ್ತಾರೆ. ಚರಿತ್ರೆಕಾರರ ಪ್ರಕಾರ ಒಬ್ಬ ಅರಸು ಇದರಿಂದ ೨೦ ರಿಂದ ೨೫ ವರ್ಷಗಳ ಆಳ್ವಿಕೆಯನ್ನು ನಡೆಸುತ್ತಾನೆ. ಆದರೆ ಚಂಗ ಅರಸರ ಆಳ್ವಿಕೆಯ ಅವಧಿ ನಿಗಧಿಗಿಂತ ಇಮ್ಮಡಿಯಗಿದೆ ಎಂಬ ವಾದ ಸ್ವಾಮಿಯವರು ನೀಡುತ್ತಾರೆ.

ಸ್ವಾಮಿಯವರು ವೆಂಕಟಸ್ವಾಮಿ ಬರೆದ ಚಂಗ ಕಾಲ ತಮಿಳರ ಚರಿತ್ರೆಯಲ್ಲಿ ಕೆಲವು ವಿಷಯಗಳಲ್ಲಿ ಸುಮೇರಿಯಾ ಮತ್ತು ಅಕ್ಕಾಡಿಯ ಅರಸರು ಸರಾಸರಿ ೧೦೬ ವರ್ಷಗಳು ಆಳ್ವಿಕೆ ನಡೆಸಿದ ಉದಾಹರಣೆ ನೀಡಿರುವ ಕುರಿತು ಮತ್ತು ಕಾಲ್ದಿಯ ನಾಡಿನ ಚರಿತೆಯಲ್ಲಿ ಕುರಿತು ಒಬ್ಬ ಅರಸು ೧೯೨ ವರ್ಷಗಳ ಆಳ್ವಿಕೆಯಿದೆ ಎಂಬ ವಾದಕ್ಕೆ ಸ್ವಾಮಿಯವರು ಈ ರೀತಿ ಅದನ್ನು ವಿಶ್ಲೇಷಿಸುತ್ತಾರೆ.

"ಆ ರಾಜವಂಶಗಳು ಚಾರಿತ್ರಿಕವಾದವು ಎಂಬುದನ್ನು ಒಪ್ಪಿಕೊಳ್ಳಲು ಚರಿತ್ರೆಕಾರರು ಹಿಂಜರಿಯುತ್ತಾರೆ. ಅದು ಒಂದು ಬಗೆಯ ಪುರಾಣ ವಾಗಿರಲು ಸಾಧ್ಯವೆಂಬುದನ್ನು ಅರಿತುಕೊಂಡಿದ್ದಾರೆ. ಸುಮೇರಿಯಾದ ಒಂದು ವರ್ಷ ಎಂದರೆ ಎಷ್ಟು ದಿನವೆಂಬುದು ಇನ್ನೂ ನಿಷ್ಕರ್ಷೆಯಾಗಿಲ್ಲ."[೬]

ಸುಮೇರಿಯಾ ಮತ್ತು ಕಾಲ್ದಿಯ ಚರಿತ್ರೆಯಲ್ಲಿ ಅದು ಪುರಾಣವೆಂದು ಸ್ವಾಮಿಯವರು ವಾದ ನೀಡುತ್ತಾರೆ. ಹಾಗೆ ಸುಮೇರಿಯಾದ ಅಂದಿನ ಕ್ಯಾಲೆಂಡರ್ ಪ್ರಕಾರ ಒಂದು ವರ್ಷಕ್ಕೆ ಎಷ್ಟು ದಿನವೆಂಬುದು ನಿರ್ಧಾರವಾಗಿಲ್ಲ ಎಂದು ಸ್ವಾಮಿಯವರು ಚಂಗ ಅರಸರ ಕಾಲಗಣನೆಯು ಕಲ್ಪನೆಯಿಂದ ಕೂಡಿದ್ದು ಎಂದು ತಮ್ಮ ವಾದ ಮಂಡಿಸುವುದರೊಂದಿಗೆ ಚಂಗ ಕಾಲದ ಕುರಿತು ತಮ್ಮ ಒಟ್ಟು ಅಭಿಪ್ರಾಯಗಳು ಈ ರೀತಿ ಹೇಳುತ್ತಾರೆ.

"ಚಂಗ ಪುರಾಣದ ಚಾರಿತ್ರಿಕತೆಯಲ್ಲಿ ನನಗೆ ನಂಬಿಕೆ ಕೊನರಿಲ್ಲ. ತಮಿಳು ಸಾಹಿತ್ಯ ಕ್ರಿಸ್ತಾರಂಭ ಯುಗದಲ್ಲೆ ಸೃಷ್ಟಿಯಾಗಿತ್ತು ಎಂಬ ಹೇಳಿಕೆಯಲ್ಲಿ ನನಗೆ ವಿಶ್ವಾಸ ಅಂಕುರಿಸಿಲ್ಲ. ಅಷ್ಟು ಹಳೆಯದು ಎಂಬುದಕ್ಕೆ ತಮಿಳುರು ತೋರಿಸುವ ಆಧಾರಗಳು ಅದ್ಭುತಾಶ್ಚರ್ಯಗಳಿಂದ ರೂಪುಗೊಂಡಿವೆಯೇ ಹೊರತು ವಾಸ್ತವಿಕತೆಯನ್ನು ಹೊಂದಿಲ್ಲ."[೭]

ಚಂಗಕಾಲದ ಚರಿತ್ರೆಯು ಪುರಾಣದಂತೆ ಕಾಲ್ಪನಿಕವಾಗಿದ್ದು ಅದಕ್ಕೆ ತಮಿಳು ಪಂಡಿತರು ನೀಡುವ ಆಧಾರಗಳು ವೈಜ್ಞಾನಿಕವಾಗಿ ಇಲ್ಲ ಎಂದು ಅವರು ನೀಡುವ ಆಧಾರಗಳೆಲ್ಲ ಕಾಲ್ಪನಿಕ ರೂಪದಾಗಿದೆ ಎಂದು ಸ್ವಾಮಿಯವರು ಚಂಗಕಾಲದ ಚರಿತ್ರೆಯ ತಮಿಳು ನೀಡುವ ಆಧಾರಗಳ ಬಗ್ಗೆ ತಮಗೆ ಇರುವ ಸಂದೇಹವನ್ನು ಹೊರಹಾಕುತ್ತಾರೆ.

ಸಮುದ್ರದ ಅಲೆಯಲ್ಲಿ ಕೊಚ್ಚಿಹೋದ ಎಂದು ಹೇಳಲಾಗುವ ಚಂಗ ಸಂಸ್ಕೃತಿಯ ಕುರಿತು ಸ್ವಾಮಿಯವರು ಸಮುದ್ರ ಉಬ್ಬರದ ಅಲೆಗಳ ಬಗ್ಗೆ ಅವರು ತಮ್ಮ ಅಭಿಪ್ರಾಯ ಈ ರೀತಿ ನೀಡುತ್ತಾರೆ. "ಟೈಡಲ್ ವೇವ್ (ಉಬ್ಬರದ ಅಲೆಗಳು) ಒಂದೊಂದು ತೀರ ಪಟ್ಟಣಗಳಿಗೂ

ಬಾಧೆ ತರುವುದುಂಟು. ದೊಡ್ಡ ನದೀ ತೀರಗಳಲ್ಲಿಯೂ ಪ್ರವಾಹದ ಹಾನಿಯನ್ನು ಕಾಣಬಹುದು. ಆದರೆ ದೊಡ್ಡ ಭೂಭಾಗವೇ ದಿಢೀರನೆ ಕೊಚ್ಚಿ ಹೋಯಿತು ಎನ್ನುವುದು ಪುರಾಣವಾಗುತ್ತದೆ." ಒಂದು ವೇಳೆ ಭೂಮಿ ಮುಳುಗಿದ್ದರೂ ಅದು ಕೆಲವು ವರ್ಷಗಳಲ್ಲಿ ಆಗುವ ಕೆಲಸವಲ್ಲ ಲಕ್ಷಾಂತರ ವರ್ಷಗಳು ಬೇಕಾಗುತ್ತದೆ. ಈ ದೃಷ್ಟಿಯಿಂದ ಚಂಗಗಳನ್ನು ಅಳೆದರೆ ಒಂದೊಂದು ಚಂಗದ ನಡೆವೆಯೂ ಸಂಹಾರ ಕಾರ್ಯ ಕೆಲವು ವರ್ಷಗಳಾದರೂ ನಡೆದಿರಬೇಕು ಎಂದು ಊಹಿಸಿಕೊಳ್ಳಬೇಕಾಗುತ್ತದೆ! ಆಗ ನಿಮ್ಮ ಮೊದಲನೆಯ ಎರಡು ಚಂಗಗಳನ್ನು ಮನುಷ್ಯ ಭೂಮಿಯ ಮೇಲೆ ಹುಟ್ಟಿದ ಕಾಲಕ್ಕೂ ಹಿಂದೆ ತಳ್ಳಿ ಬಿಡಬೇಕಾಗುತ್ತದೆ."೮

ಚಂಗಕಾಲ ಸಂಸ್ಕೃತಿ ಸಾಹಿತ್ಯವೋ ಸಮುದ್ರದಲ್ಲಿ ಕೊಚ್ಚಿ ಹೋಯಿತು ಎಂಬ ತಮಿಳರ ವಾದಕ್ಕೆ ಸ್ವಾಮಿಯರು ಈ ರೀತಿಯಾಗಿ ಸಮುದ್ರದ ಅಲೆಗಳು ಅಪ್ಪಳಿಸಿ ಪ್ರವಾಹ ಉಂಟಾಗಿ ಸಂಪೂರ್ಣ ಭೂಮಿ ಕೊಚ್ಚಿ ಹೋದ ಬಗ್ಗೆ ಎಲ್ಲೂ ವೈಜ್ಞಾನಿಕ ಆಧಾರಗಳಿಲ್ಲ. ಇದು ಪುರಾಣದಂತೆ ಕಾಲ್ಪನಿಕ ಎಂದು ಹೇಳುತ್ತಾರೆ. ಒಂದು ಚಂಗ ಮುಳುಗಿದ್ದ. ನಂತರ ಇನ್ನೊಂದು ಚಂಗ ಮುಳುಗಲು ಲಕ್ಷಾಂತರ ವರ್ಷಗಳು ಬೇಕು. ಹೀಗೆ ಲೆಕ್ಕ ಹಾಕಿದರೆ ಮೊದಲನೇ ಎರಡು ಚಂಗಕಾಲ ಮನುಷ್ಯ ಭೂಮಿಯ ಮೇಲೆ ಹುಟ್ಟುವುದಕ್ಕೂ ಪೂರ್ವದ್ದೇ ಎಂದು ಪ್ರಶ್ನಿಸುತ್ತಾರೆ.

ಚಂಗ ಎಂಬ ಪದ ಹೇಗೆ ಬಳಕೆಗೆ ಬಂದಿತ್ತು ಎಂಬುದು ಸ್ವಾಮಿಯವರು ಆಧಾರಸಹಿತವಾಗಿ ಹೀಗೆ ಮಂಡಿಸುತ್ತಾರೆ.

"ಹಳೆಯ ತಮಿಳು ಸಾಹಿತ್ಯ ೧೮೦೦ ವರ್ಷಗಳ ಹಿಂದಿನದು ಎಂದು ಮೊದಲು ನಾಂದಿ ಹಾಡಿದವರು ಕನಕಸಭೆ. ಅಂದರೆ ಅವರು ಚಂಗ, ಚಂಗಕಾಲ, ಚಂಗ ಸಾಹಿತ್ಯ ಎಂಬ ಯಾವು ಪದಗಳನ್ನು ಬಳಸಲಿಲ್ಲ. ಈ ಭಾವನೆಯನ್ನು ಯಾರು ಯಾವಾಗ ಹಡೆದರು ಎಂಬ ಪ್ರಶ್ನೆಗೆ ಸಮಾಧಾನ ಹೇಳುವುದು ಸುಲಭವಲ್ಲ. ಅದೇ ಸುಮಾರಿನಲ್ಲಿ ಯು.ವಿ.ಸ್ವಾಮಿನಾಥ ಅಯ್ಯರ್ ಅವರು ಹಳೆಯ ತಮಿಳು ಸಾಹಿತ್ಯ ಸಂಪಾದನೆಯ ಕಾರ್ಯದಲ್ಲಿ ತೊಡಗಿದ್ದು, ಆಗಾಗ ಬರೆಯುತ್ತಿದ್ದ ಪ್ರಬಂಧಗಳಲ್ಲಿ ಸಂಕಲನ ಗ್ರಂಥಗಳನ್ನು ಚಂಗನೋಲ್ (ಚಂಗಗ್ರಂಥ) ಅಥವಾ ಚಂಗ ಸಾಹಿತ್ಯ ಎಂದು ನಿರ್ದೇಶಿಸುತ್ತಿದ್ದರು. ೧೯೨೯ರಲ್ಲಿ ಕೊಟ್ಟ ಉಪನ್ಯಾಸ ಎಂದರೆ ಅಹಪ್ಪೊರುಳಿನ ಸಂಪ್ರದಾಯವನ್ನೇ ಎತ್ತಿ ಹಿಡಿದರು. ಶಿವಮಹಾದೇವ ವಿಷ್ಣು ಮುರುಗ ಮೊದಲಾದ ದೈವಗಳಿಂದಲೂ ಹಿರಿಯರಿಂದಲೂ ದೈವೀಕತ್ವವನ್ನು ಪಡದು ಪಾಂಡ್ಯ

ಅರಸರಿಂದ ಶ್ಲಾಘನೀಯ ರೀತಿಯಲ್ಲಿ ಪರಿಪಾಲಿತವಾದ್ದರಿಂದಲೂ ಈ ಚಂಗ ಊರ್ಜಿತವಾಗಿತ್ತು. ಇದೇ ಉಪನ್ಯಾಸಗಳಲ್ಲಿ ಚಂಗಕಾಲದ ಕವಿಗಳು, ಚಂಗಕಾಲದಿಂದ ಈಚೆಗೆ ತಮಿಳರನ್ನು ಪೋಷಿಸಿದ ಪ್ರಭುಗಳು ಮೊದಲಾದವರನ್ನು ಕುರಿತು ಸಂಗತಿಗಳನ್ನು ತಿಳಿಸಿದರು. ಆದರೂ ಅವರ ಬರಹಗಳಲ್ಲಿ 'ಚಂಗಕಾಲ' ಎಂಬ ಪದ ಕೇವಲ ವಿವರಣೆ ಉದ್ದೇಶಕ್ಕಾಗಿ ಉಪಯೋಗವಾಗಿದೆಯೇ ಹೊರತು ಚಾರಿತ್ರಿಕ ಸೊಂಕನ್ನು ಅಂಟಿಸಿಕೊಂಡಿಲ್ಲ. ಕನಕಸಭೆ ಪಿಳ್ಳೆಯವರು ಇದಕ್ಕೂ ಹಿಂದೆ ಈ ಬಗೆಯ ಸಾಹಿತ್ಯಾಭ್ಯಾಸದಿಂದ ವ್ಯಕ್ತವಾದ ಸಂಸ್ಕೃತಿಯ ವಿಷಯವನ್ನು ಕುರಿತು ಪ್ರಬಂಧಗಳನ್ನು ಬರೆಯುತ್ತಿದ್ದರು. ಮೂಲ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ಅರಸರು, ಹೆಗಡೆಗಳು, ಕದನಗಳು, ಮೊದಲಾದ ವಿಷಯಗಳನ್ನು ಹಿಡಿದು ಬರೆದಿರುವವರಾದರೂ ಚಂಗಕಾಲವೆಂದು ನಿರ್ದೇಶಿಸಲಿಲ್ಲ."೯

ಬಿ.ಜಿ.ಎಲ್.ಸ್ವಾಮಿಯವರು ಚಂಗಕಾಲದ ಚಾರಿತ್ರಿಕ ಸಂದರ್ಭದಲ್ಲಿ ಹೇಗೆ ಹುಟ್ಟಿಕೊಂಡಿತ್ತು ಎಂಬ ವಿಷಯವನ್ನು ಮತ್ತು ಚಂಗ ಎಂಬ ಪದದ ಬಳಕೆಯು ಹೇಗೆ ಬಂತು ಎಂಬುದಕ್ಕೆ ವಿವರಣೆಯನ್ನು ನೀಡುತ್ತಾರೆ. ತಮಿಳು ಸಾಹಿತ್ಯ ೧೮೦೦ ವರ್ಷಗಳ ಹಿಂದಿನದು ಎಂದು ಮೊದಲ ನಾಂದಿ ಹಾಡಿದವರು ಕನಕಸಭೆ (1904, Tumils 1800 & go ಕೃತಿಯಲಿ ಬರೆದರು) ಎಂದು ಆಧಾರ ನೀಡುತ್ತಾ ಯು.ವಿ. ಸ್ವಾಮಿನಾಥನ್ ಅಯ್ಯರ್ ಅವರು ಹಳೆಯ ತಮಿಳು ಗ್ರಂಥಗಳನ್ನು ಸಂಪಾದನೆಗೆ ತೊಡಗಿದಾಗ ಚಂಗ ಎಂದರೆ ಕವಿಗಳ ಕೂಟ ಎಂಬ ಅರ್ಥವನ್ನು "ಚಂಗತ್ತೆಮಿಳಂ ಪಿರ್ಕಾಲತ್ತೆಮಿಳಂ" ಎಂಬ ಉಪನ್ಯಾಸದಲ್ಲಿ ಕೊಟ್ಟಿದ್ದರು ಎಂದು ಸ್ವಾಮಿಯವರು ವಿವರಣೆಕೊಡುತ್ತಾರೆ. ಅದು ಕೇವಲ ವಿವರಣೆಗಾಗಿ ಚಂಗಾಕಾಲ ಎಂಬ ಪದ ಪ್ರಯೋಗಿಸಿದ್ದರು ಎಂಬ ವಾದವನ್ನು ಸ್ವಾಮಿಯವರು ಮಾಡುತ್ತಾರೆ.

"ಚಂಗಕಾಲವನ್ನು ಸು. ಕ್ರಿಸ್ತ ಪೂರ್ವ ಕಾಲದ್ದು. ಎಂಬ ತಮಿಳು ಪಂಡಿತರ ವಾದಕ್ಕೆ ಸ್ವಾಮಿಯವರು ವೈಜ್ಞಾನಿಕ ಆಧಾರಗಳನ್ನು ಕೇಳುತ್ತಾರೆ. ಶಿವರಾಜ ಪಿಳ್ಳೆಯವರು ಚಂಗಾಲವನ್ನು ೧೮೦೦ ವರ್ಷಗಳಷ್ಟು ಹಳೆಯದ್ದು ಎಂದು ಬರೆದಿದ್ದುಕ್ಕೆ (The Chorondogy of the Early Tamils)ರಾಜಮನೆತನಗಳ ಅಧ್ಯಯನ ಮಾಡುವಾಗ ಕಾಲದ ಕಲ್ಪನೆ ಅನಿವಾಯವಾಗುತ್ತದೆ" ಎಂದು ಹೇಳುತ್ತಾರೆ. ತಮಿಳು ಪಂಡಿತರಾದ ಶ್ರೀನಿವಾಸ್ ಅಯ್ಯಂಗಾರ, ಶೇಷ ಅಯ್ಯಂಗಾರ್ ಚಂಗಾಕಾಲ ಕ್ರಿ.ಪೂ. ೨೦೦೦ಗಳ ಹಳೆದು ಎಂದು ಸಾಧಿಸಿದ್ದು ಅಸಮರ್ಥನೀಯ ಎಂಬ ವಾದ ಸ್ವಾಮಿಯವರದ್ದು.

ಚಂಗಾಕಾಲ, ಚಂಗ ಸಾಹಿತ್ಯದ ಕುರಿತು ತಮಿಳರ ಕಲ್ಪನೆಯನ್ನು ಸ್ವಾಮಿಯವರು ಹೀಗೆ ವ್ಯಂಗ್ಯವಾಗಿ ಹೇಳುತ್ತಾರೆ. "ಚಂಗ ಸೌಧವನ್ನು ವಿಹಂಗಮ ದೃಷ್ಟಿಯಿಂದ ಅಳೆದವ. ಹಳ್ಳದಿಂದ ವೀಕ್ಷಿಸಿದವ. ದಿನ್ನೇಯನ್ನೇರಿ ನೋಡಿದವ. ಒಂದೇ ದಿಕ್ಕಿನಿಂದ ಪರೀಸಿದವ, ಎಂಟು ದಿಕ್ಕಿನಲ್ಲೂ ನೋಟ ಹಾಯಿಸಿದವ. ಕಟ್ಟಡದ ಒಂದು ಕೋಣೆಯನ್ನು ಮಾತ್ರ ಅವಲೋಕಿಸಿದ ದೂಲವೊಂದನ್ನು ಮಾತ್ರ ಹತ್ತಿ ಕುಳಿತವ. ಹೆಂಚಗಳನ್ನು ಹಾರಿಸಿದವ. ನೆಲವನ್ನು ಸಾರಿಸಿದವ. ಗವಾಕ್ಷಿಯ ಮೂಲಕ ಒಳಹೊಕ್ಕು ಅದೇ ಗವಾಕ್ಷಿಯ ಮೂಲಕ ಹೊರಕ್ಕೆ ಹಾರಿದವ. ಹೀಗೆ ನೂರಾರು ದೃಷ್ಟಿಗಳಿಂದ ಚಂಗ ಕಾಲದ ಸಂಸ್ಕೃತಿಯ ಅಧ್ಯಯನ ನಡೆದಿದೆ."[೧೦]

ಚಂಗಕಾಲ ಸಾಹಿತ್ಯವನ್ನು ಕುರಿತು ಅಧ್ಯಯನವನ್ನು ಮಾಡಿದವರ ಕುರಿತು ಸ್ವಾಮಿಯವರು ಹೇಳಿದ ಮಾತುಗಳು ಚಂಗಕಾಲವನ್ನು ಸಮಗ್ರವಾಗಿ ಆಧಾರಸಹಿತವಾಗಿ ಅಧ್ಯಯನ ಮಾಡದೇ ಅದನ್ನು ತಾವು ಕಂಡುಕೊಂಡ ಬಗ್ಗೆ ಹೀಗೆದೆ ಎಂಬುದನ್ನು ಕುರಿತು ಅವರ ಸಂಕುಚಿತವಾದ ಅರ್ಥಗ್ರಹಿಕೆ ಅವರು ತಿಳಿದ ವಿಚಾರ ಸಮೇತ ಎಂಬುದನ್ನು ಸ್ವಾಮಿಯವರು ಹೇಳುತ್ತಾ ಆ ಚಂಗ ಕಾಲವನ್ನು ಸಮಗ್ರವಾಗಿ, ಆಧಾರಸಹಿತ ಅಧ್ಯಯನ ಮಾಡದೆ ಅವರ ವಿಚಾರಕ್ಕೆ ತಕ್ಕಂತೆ ಅಧ್ಯಯನ ನಡೆಯುತ್ತಾ ಇದೆ ಎಂದು ಸ್ವಾಮಿಯವರು ಹೇಳುತ್ತಾರೆ. ಅಲ್ಲದೇ ಆಧಾರವೇ ಇಲ್ಲದ ಊಹೆಯೊಂದಕ್ಕೆ ಹಲವು ಆಯಾಮಗಳಿವೆ ಎಂದು ಹೇಳಿದ್ದು ವ್ಯಂಗ್ಯ ವಾಗಿ ಕಂಡುಬರುತ್ತದೆ.

ತೋಲ್ಕಪಿಯಂ ಕಾಲವಿಚಾರ ಕುರಿತು ಸ್ವಾಮಿಯವರು ಹಲವು ಆಧಾರಗಳ ಮೂಲಕ ತೋಲ್ಕಪಿಯಂ ಕ್ರಿ.ಪೂ.ಕ್ಕೆ ಸೇರಿದಲ್ಲ ಎಂಬ ವಾದವನ್ನು ಮಾಡುತ್ತಾರೆ. ಅವರು ತೋಲ್ಕಪಿಯಂ ಕಾಲವಿಚಾರ ಕುರಿತು The date of Talkappiyam aretrospect ಎಂಬ ಸಂಶೋಧ ಲೇಖನ Annuals of Orental Research Bulltin ಪತ್ರಿಕೆ ಬರೆಯುತ್ತಾರೆ. ಅವರ "ತಮಿಳ ತಲೆಗಳ ನಡುವೆಯೆ" ಕೃತಿಯಲ್ಲಿ ಮಾಡಿದ ವಿಚಾರಗಳು ಈ ರೀತಿ ಇವೆ.

"ತೊಲ್‌ಕಾಪಿಯಂದಲ್ಲಿ ಮೂರು ಅಧಿಕಾರಗಳಿವೆ. ಎಳುತ್ತಧಿಕಾರಂ (ಅಕ್ಷರಾಧಿಕಾರ) ಶೊಲ್ಲಾಧಿಕಾರಂ (ಶಬ್ದಾಧಿಕಾರಂ), ಪೊರುಳಧಿಕಾರಂ (ಅರ್ಥಾಧಿಕಾರ). ಮೊದಲನೆಯ ಎರಡು ಅಧ್ಯಾಯಗಳಿಗೆ ಪ್ರತಿಯಾಗಿ, ಮೂರನೆಯ ಅಧ್ಯಾಯ ಒಂದು ಕಲಸುಮೇಲೋಣ ರವಿದ್ದಂತೆ ಭಾಸವಾಗುತ್ತದೆ. ಇದರಲ್ಲಿ ಭೂಭಾಗದ ವಿಂಗಡನೆ ಒಂದೊಂದು ಭಾಗಕ್ಕೂ ವಿಶಿಷ್ಟವಾದ ಸಸ್ಯಗಳು, ಪ್ರಾಣಿಗಳು ಅಲ್ಲಲ್ಲಿಯ ಜನ, ಅವರ ಕಸುಬು, ಅವರು ಪೂಜಿಸಿದ ದೈವ,

ಸಹಗಮನ ಪದ್ಧತಿ, ಶೃಂಗಾರದ ವಿಧಗಳು, ವೀರಗಲ್ಲು ಸ್ಥಾಪನೆ ಮೊದಲಾದವುಗಳನ್ನು ಕುರಿತಿದೆ."[೧೧]

ತೊಲ್‌ಕಾಪಿಯಂ ಗ್ರಂಥದಲ್ಲಿರುವ ವಿಷಯಗಳನ್ನು ಸ್ವಾಮಿಯವರು ವಿವರಿಸುತ್ತಾ, ವ್ಯಾಕರಣ ಗ್ರಂಥದಲ್ಲಿ ಈ ಎಲ್ಲಾ ವಿಷಯಗಳು ಹೇಗೆ ಸೇರಿಕೊಂಡವು ಎಂದು ವಿಮರ್ಶಿಸುತ್ತಾರೆ. ಸಹಗಮನ ಪದ್ಧತಿ, ಶೃಂಗಾರದ ವಿಧಗಳು, ಅವರ ಕಸುಬು, ಮುಂತಾದ ಸಾಮಾಜಿಕ ಚಟುವಟಿಕೆಗಳು ಈ ವ್ಯಾಕರಣ ಗ್ರಂಥದಲ್ಲಿ ಸೇರಿಕೊಂಡಿವೆ ಎಂದು ಪ್ರಶ್ನಿಸುತ್ತಾರೆ.

ತೊಲ್‌ಕಾಪ್ಪಿಯಂ ಕೃತಿಯ ಕರ್ತೃವಿನ ಕುರಿತು ಸ್ವಾಮಿಯವರು ತಮಗೆ ಇರುವ ಅಭಿಪ್ರಾಯವನ್ನು ಹೀಗೆ ಚರ್ಚಿಸುತ್ತಾರೆ.

"ತೊಲ್‌ಕಾಪ್ಪಿಯದ ಕರ್ತೃ ಯಾರು? ತೊಲ್‌ಕಾಪ್ಪಿಯನ್ ಅಥವಾ ತೊಲ್‌ಕಾಪ್ಪಿಯನಾರ್! ರಾಮಾಯಣದ ಕರ್ತೃಯಾರು? ಎಂದು ಕೇಳಿದರೆ "ರಾಮಾಯಣಪ್ಪ ಅಥವಾ ರಾಮಾಯಣಪ್ಪನವರು ಎಂದು ಬದುಲು ಹೇಳಿದಂತೆ ಇದೆಲ್ಲವೇ"[೧೨]

ತೊಲ್ಕಪಿಯಂದ ಕರ್ತೃ ತೊಲ್ಕಪಿಯನ್ ಅಥವಾ ತೊಲ್‌ತಾಪ್ಪಿಯನಾರ್ ಎಂಬುದಕ್ಕೆ ಸ್ವಾಮಿಯವರಿಗೆ ಅಸಮಧಾನವಿದೆ. ರಾಮಾಯಣ ಬರೆದಿರುವುದು ರಾಮಾಯಣಪ್ಪ ಎಂದು ಹೇಳಿದಂತೆ ಆಗುತ್ತದೆ. ಕೃತಿಗೆ ಕರ್ತೃವಿನ ಹೆಸರು ಇರಲು ಸಾಧ್ಯವಿಲ್ಲ. ತೊಲ್ಕಸಾಯಂದ ಕರ್ತೃ ಅಜ್ಞಾತ ಕವಿ ಎಂಬುದು ಸ್ವಾಮಿಯವರ ಅಭಿಪ್ರಾಯ.

ತೊಲ್ಕಪಿಯಂ ಕಾಲವಿಚಾರಗಳು ಕುರಿತು ಇರುವ ಭಿನ್ನಾಭಿಪ್ರಾಯಗಳ ಕುರಿತು ಸ್ವಾಮಿಯವರು ಚರ್ಚಿಸುತ್ತಾ ತಮ್ಮದೇ ಆದ ವಿವರಣೆಯನ್ನು ನೀಡಿದ್ದಾರೆ.

"ಈ ವಿಚಾರಗಳನ್ನು ಕುರಿತು ಲೇಖನ ಬರೆದು ಅಚ್ಚು ಹಾಕಿಸಿದೆ. ಮದರಾಸು ವಿಶ್ವವಿದ್ಯಾಲಯದ ಪತ್ರಿಕೆಯೊಂದರಲ್ಲಿ ಪ್ರಕಟವಾಯಿತು. ಕನ್ನಡ, ತೆಲಗು, ಮಲೆಯಾಳ ಭಾಷಾ ಚರಿತ್ರೆಗಳನ್ನು ಹೋಲಿಸಿ, ಶಾಸನಗಳಾಗಲಿ ಸಾಹಿತ್ಯವಾಗಲಿ ಆಯಾ ಭಾಷೆಯಲ್ಲಿ ೯ನೇ ಶತಮಾನಕ್ಕಿಂತ ಹಿಂದೆ ದೊರಕುವುದು (ಕನ್ನಡವನ್ನುಳಿದು) ದುರ್ಲಭವೆಂದು ಅದರಿಂದ ಅದಕ್ಕಿಂತಲೂ ಹಿಂದಕ್ಕೆ ಈ ದ್ರಾವಿಡ ಭಾಷೆಗಳ ಸಾಹಿತ್ಯವನ್ನು ಕೊಂಡೊಯ್ಯುವುದು ಸಾಧುವಲ್ಲವೆಂದು ವಾದಿಸಿದೆ. ೧೩ನೇ ಶತಮಾನದಲ್ಲಿ ತೊಲ್‌ಕಾಪ್ಪಿಯಕ್ಕೆ ವ್ಯಾಖ್ಯಾನಗಳು ರಚಿತವಾಗಿರುವುದರಿಂದ ಕೃತಿಯು ಕ್ರಿ.ಶ. ಸುಮಾರು ಹತ್ತನೆಯ ಶತಮಾನಕ್ಕೆ ಹಿಂದೆ ರಚಿತವಾಗಿದ್ದಿರಲಾರೆಂದು ಅಭಿಪ್ರಾಯ ಸೂಚಿಸಿದೆ."[೧೩]

ತೊಲ್ಕಪಿಯಂ ಕಾಲವಿಚಾರ ಕುರಿತು ಸ್ವಾಮಿಯವರು ಕ್ರಿ.ಶ. ೧೯೭೫ರಲ್ಲಿ "The date of Talkappiyam a retrospect. Ann. Oriental Res." ಮದ್ರಾಸಿನ ಪತ್ರಿಕೆ ಬರೆದಿದ್ದು, ಅದರಲ್ಲಿ ದ್ರಾವಿಡ ಭಾಷೆಗಳ ಸಾಹಿತ್ಯ ಚರಿತ್ರೆ, ಕನ್ನಡವನ್ನು ಬಿಟ್ಟು ಉಳಿದ ತೆಲುಗು, ಮಲೆಯಾಳಂ, ತಮಿಳು, ಭಾಷಾ ಸಾಹಿತ್ಯ ಚರಿತ್ರೆ ಶಿಲಪ್ಪದಿಕಾರಂ ಕಾಲದ ಬಗ್ಗೆ ಇರುವ ವಿದ್ವಾಂಸರ ಅಭಿಪ್ರಾಯಗಳು ಯಾವ ರೀತಿ ಇವೆ ಎಂಬುದನ್ನು ಸ್ವಾಮಿಯವರು ವಿವರಿಸುತ್ತಾರೆ. ೧೦ನೇ ಶತಮಾನಗಳ ಕಾಲಾವಧಿಯಲ್ಲಿ ಕ್ರಿ.ಪೂ. ೨ನೇ ಶತಮಾನದಿಂದ ಹಿಡಿದು ಕ್ರಿ.ಶ. ೮ನೇ ಶತಮಾನದವರೆಗೂ ಎಂದು ನೀಲಕಂಠಶಾಸ್ತ್ರೀಗಳ The Aryan and the dravidian ಎಂಬ ಕೃತಿಯಲ್ಲಿ ವಿವರಿಸಿದ್ದು ಸ್ವಾಮಿಯವರು ಇಲ್ಲಿ ಆಧಾರವಾಗಿ ಬಳಸಿಕೊಂಡು ಚರ್ಚೆ ಮಾಡುತ್ತಾರೆ.

ನೀಲಕಂಠಶಾಸ್ತ್ರೀ ಶಾಸ್ತ್ರೀಗಳು ಶಿಲಪ್ಪದಿಕಾರಂ ಕೃತಿಯ ಕಾಲದ ಕುರಿತು ಹೇಳಿರುವ ಅಭಿಪ್ರಾಯ ಸ್ವಾಮಿಯವರು ಇಲ್ಲಿ ದಾಖಲಿಸುತ್ತಾರೆ.

"ಬೇರೆ ಬೇರೆ ಕಾಲಗಳಲ್ಲಿ ಬರೆದ ಒಬ್ಬನೇ ಕರ್ತೃವಿಗೂ ಈ ಕಾವ್ಯದ ರಚನಾಕಾಲದ ವಿಷಯವಾಗಿ ಬೇರೆ ಬೇರೆ ಅಭಿಪ್ರಾಯಗಳು ಮೂಢಿಬಂದಿವೆ. ೧೯೫೫ರಲ್ಲಿ ರಚನಾಕಾಲ ಕ್ರಿ.ಶ. ಆರನೇ ಶತಮಾನಕ್ಕಿಂತಲೂ ಈಚಿನದಲ್ಲ" ಎಂದು ನೀಲಕಂಠಶಾಸ್ತ್ರೀಗಳು ೧೯೬೫ರಲ್ಲಿ "ಶಿಲಪ್ಪದಿಕಾರ ಮತ್ತು ಮಣಿಮೇಕಲ್ ಕಾವ್ಯಗಳು ೮ನೇ ಶತಮಾನದಲ್ಲಿ ಸೃಷ್ಟಿಯಾದ ಸಾಹಿತ್ಯ ವಂಚನೆಗಳು (Literary hoaxes) ಆಗ ನಡೆದಿರಬಹುದಾದ ಘಟನೆಗಳನ್ನು ಅನೇಕ ಶತಮಾನಗಳ ಹಿಂದೆ ನಡೆದಂತೆ ರಚನೆಗೊಂಡಿವೆ ಎಂದು ಬರೆದರು."[೧೪]

ನೀಲಕಂಠಶಾಸ್ತ್ರೀಯವರು ಶಿಲಪ್ಪದಿಕಾರಂ ಕಾಲದ ಬಗ್ಗೆ ಮಂಡಿಸಿದ ವಿವರಗಳನ್ನು ಸ್ವಾಮಿಯವರು ವಿವರಿಸುತ್ತಾರೆ. ಶಿಲ್ಪದಿಕಾರ ಮತ್ತು ಮಣಿಮೇಕಲ್ ಕಾವ್ಯಗಳು ೮ನೇ ಶತಮಾನದಲ್ಲಿ ಸಂಘಯಾದವು ವಿವರಿಸುವರು. ಶಿಲಪ್ಪದಿಕಾರಂ ಕುರಿತು ಸ್ವಾಮಿಯವರು. ತಮ್ಮ ಒಬ್ಬ ಅಭಿಪ್ರಾಯವನ್ನು ಈ ರೀತಿ ಮಂಡಿಸಿದ್ದಾರೆ.

"ಶಿಲಪ್ಪದಿಕಾರ ಕರ್ತೃ ಕಥನ ರೀತಿಗೆ ವಿಧವಿಧ ಛಂದಸ್ಸಿನ ಪದ್ಯಗಳನ್ನೂ ನಡುನಡುವೆ ಗದ್ಯದ ಬಳಸಿಕೊಂಡಿದ್ದಾನೆ. ಈ ಕಾವ್ಯರೂಪಕ್ಕೆ ಚಂಪೂ ಎಂದು ಹೆಸರು (ಸಭಿಕರು ತಮ್ಮ ತಮ್ಮೊಳದ ಕೊಂಡರು) ಚಂಪೂಶೈಲಿ ಬಹಳ ಇಳೆಯದು (ಇತರರ ದಾರಿಯನ್ನು ತುಳಿಯುತ್ತಾನೆ ಭಾವಿಸಿ ಶಾಂತಗೊಂಡರು) ಕ್ರಿ.ಶ. ೯ನೆಯ ಶತಮಾನಕ್ಕೂ ಹಿಂದೆ ಒಯ್ಯುವುದು ಸಾಧುವಲ್ಲ

ಎಂದು ಸಾಧಿಸಿರುವುದು ಮತ್ತು ತೊಲ್ಕಪಿಯಂ ಕ್ರಿಶ. ೧೦ನೆಯ ಶತಮಾನದಾಗಿದೆ"[೧೫] ಎಂದು ತಮ್ಮ ಅಭಿಪ್ರಾಯ ಮಂಡಿಸುತ್ತಾರೆ.

ತಮಿಳಿನ ಮತ್ತೊಂದು ಕೃತಿ ಶಿಲಪ್ಪದಿಕಾರಂ ಕುರಿತು ಸ್ವಾಮಿಯರು ಈ ಕೃತಿಯಲ್ಲಿ ಚರ್ಚೆ ಮಾಡುತ್ತಾರೆ. ಶಿಲಪ್ಪದಿಕಾರಂನ ವಸ್ತು ವಿಷಯ ಹಾಗೂ ಅದರ ಕಾಲಮಾನವನ್ನು ಕುರಿತು ಸ್ವಾಮಿಯವರು ಹಲವು ಪ್ರಶ್ನೆಗಳನ್ನು ಎತ್ತಿ ಚರ್ಚಿಸುವುದು ಕಾಣುತ್ತೇವೆ. ಶಿಲಪ್ಪದಿಕಾರಂದ ಕುರಿತು ಸ್ವಾಮಿಯವರ ವಿವರಣೆಗಳು ಹೀಗೆ ಇವೆ.

"ಶಿಲಪ್ಪದಿಕಾರಂ ಎಂಬುದನ್ನು ಶಿಲ್ಪವಿನ ಪ್ರಕರಣ ಎಂದು ಭಾಷಾಂತರಿಸಬಹುದು. ಶಿಲಂಬು ಎಂದರೆ ಕಾಲಂದಿಗೆ, ಇಬ್ಬರು ಸ್ತ್ರೀಯರಿಗೆ ಸೇರಿದ ಕಾಲಂದುಗಳ ಸುತ್ತ ಕತೆ ಬೆಳೆದು ಬಂದಿದ್ದೆಯಾದ್ದರಿಂದ ಗ್ರಂಥದ ಹೆಸರು ಸಾರ್ಥಕವಾಗಿದೆ. ಕತೆ ಮುಖ್ಯವಾಗಿ ಒಬ್ಬ ಹೆಂಗಸು (ಕನ್ನಗಿ) ಕುರಿತದ್ದು. ಇವಳೆ ಕಥಾನಾಯಕಿ"[೧೬]

ಶಿಲ್ಪದಿಕಾರಿ ಎಂದರೆ ಕಾಲುದಂಗೆ ಎಂದು ಅರ್ಥ ನೀಡುತ್ತಾ, ಇದು ಇಬ್ಬರು ಸ್ತ್ರೀಯರ ಕುರಿತು ಕಥೆಯೆಂದು, ಕಥಾವಸ್ತುವಿನ ಬಗ್ಗೆ ಹೇಳುತ್ತಾರೆ.

"ಈ ಕಾವ್ಯದ ಕರ್ತೃ ಇಳಂಗೋ ಅಡಿಗಳ್ ಈತ ಅರಸುಮನೆತನಕ್ಕೆ ಸೇರಿದವನೆಂದೂ, ಚೆರನಾಡನ್ನು ಆಳಿದ ಶೆಂಗುಟ್ಟವನ್ ಎಂಬ ರಾಜನ ಸಂಶೋಧನೆಂದೂ ಪಾರಮಾರ್ಥಿಕ ದೃಷ್ಟಿಯಿಂದ ರಾಜ್ಯ ತ್ಯಾಗಮಾಡಿ ವೈರಾಗ್ಯವನ್ನು ಸ್ವೀಕರಿಸಿದನೆಂದೂ ಹೇಳುತ್ತಾರೆ. ಇಳಂಗೋ ವರಕವಿ, ಶಿಲಪ್ಪದಿಕಾರ ಉತ್ತಮ ಕಾವ್ಯ ಎಂಬುದನ್ನು ಯಾರು ಅಲ್ಲಗಳೆಯುವ ಹಾಗಿಲ್ಲ."[೧೭] ಶಿಲ್ಪದಿಕಾರಂ ಶ್ರೇಷ್ಠ ಕಾವ್ಯ ಹಾಗೂ ಈ ಕಾವ್ಯದ ಕರ್ತೃ ಇಳಂಗೋ ಅಡಿಗಳ್ ಒಬ್ಬ ಶ್ರೇಷ್ಠ ಕವಿ ಎಂದು ಅಡಿಗಳ್‌ರನ್ನು ವರಕವಿ ಎಂದು ಸ್ವಾಮಿಯವರು ಅಭಿಪ್ರಾಯಪಡುತ್ತಾರೆ.

"ಕನ್ನಡ ಸಾಹಿತ್ಯದಲ್ಲಿ ಚಂಪೂ ಗ್ರಂಥಗಳು ಕ್ರಿಶ. ೧೦ನೆಯ ಶತಮಾನದಿಂದ ದೊರಕುತ್ತವೆ ಎಂಬುದಕ್ಕೆ ಉಪಲಬ್ಧವಾಗಿರುವ ಗ್ರಂಥಗಳೇ ಸಾಕ್ಷಿಯಾಗಿವೆ. ೯ನೇ ಶತಮಾನದಲ್ಲಿ ಈ ಕಾವ್ಯ ಪ್ರಕಾರ ಉದಯವಾಗಿರಬಹುದು ಎಂದು ಊಹಿಸುವುದಕ್ಕೆ ಬಲವಾದ ಕಾರಣಗಳಿವೆ."[೧೮]

ಸ್ವಾಮಿಯವರು ತಮಿಳು ನಾಡಿನಲ್ಲಿ ನೀಡಿದ ಈ ಉಪನ್ಯಾಸದಲ್ಲಿ ಅವರ ಅಭಿಪ್ರಾಯದ ಪ್ರಕಾರ ಆಧಾರಸಹಿತವಾಗಿ ದ್ರಾವಿಡ ಭಾಷೆಗಳ ಸಾಹಿತ್ಯ ೯ನೇ ಶತಮಾನದ್ದು ಎಂಬುದಕ್ಕೆ ಸಾಕಷ್ಟು ಆಧಾರಗಳು ಇವೆ ಎಂದು ಹೇಳುತ್ತಾರೆ. ಚಂಪೂ ಪ್ರಕಾರವು ೯ನೇ ಶತಮಾನಕ್ಕೆ ಸೇರಿದ್ದು ಎಂಬುದು ಅವರ ವಾದವಾಗಿತ್ತು.

**ಭಾಷಿಕ ವಿಚಾರಗಳು:**

ದ್ರಾವಿಡ ಭಾಷೆಗಳ ಕುರಿತು ಕಾಲ್ಡ್‌ವೆಲ್‌ರ ಅಭಿಪ್ರಾಯವನ್ನು ಸ್ವಾಮಿಯವರು ಈ ರೀತಿ ವಿಶ್ಲೇಷಿಸಿರುವರು.

"ರೆವೆರೆಂಡ್ ಕಾಲ್ಡ್‌ವೆಲ್ ಪಂಡಿತನು ನಮಗೆ ಕರುಣಿಸಿಬಿಟ್ಟು ಹೋಗಿರುವ ತಕರಾರು ಅಷ್ಟಿಷ್ಟಲ್ಲ. ದ್ರಾವಿಡ ಭಾಷೆಗಳೆಲ್ಲೆಲ್ಲ ತಮಿಳು ತೀರದ ಹಳೆಯದು ಎಂದು ತೀರ್ಮಾನ ಮಾಡಿಟ್ಟು ಹೋಗಿದ್ದಾನೆ. ತಮಿಳನ್ನು ಆತ ಚೆನ್ನಾಗಿ ಅಭ್ಯಾಸ ಮಾಡಿದ್ದನೆಂದಿದ್ದುಕೊಂಡರು. ತೆಲುಗು, ಕನ್ನಡ, ಮಲೆಯಾಳಂ, ತುಳುಭಾಷೆಗಳ ಪರಿಚಯ ಆತನಿಗೆ ಎಷ್ಟು ಆಳವಾಗಿತ್ತು ಎಂಬ ವಿಷಯದಲ್ಲಿ ನನಗೆ ಸಂದೇಹ. ಒಂದು ವೇಳೆ ಆತ ಕನ್ನಡವನ್ನು ಪಾಂಡಿತ್ಯಪೂರ್ಣವಾಗಿ ಅಭ್ಯಾಸಮಾಡಿದ್ದು, ಇತರೆ ದ್ರಾವಿಡ ಭಾಷೆಗಳ ಅಲ್ಪಸ್ವಲ್ಪ ಪರಿಚಯ ಮಾತ್ರ ಗಳಿಸದಿದ್ದರೆ ಕನ್ನಡವೇ ದ್ರಾವಿಡ ಭಾಷೆಗಳಲ್ಲಿ ತೀರ ಹಳೆಯದ್ದು ಬರೆದಿಡುತಿದ್ದನೋ?"[೧೯]

ರೆವೆರೆಂಡ್ ಕಾಲ್ಡ್‌ವೆಲ್‌ರು A comprative Grammer of Dravidian or South Indian family f Languages ಕೃತಿಯಲ್ಲಿ ತಮಿಳು ಭಾಷೆ ಹಳೆಯದ್ದು ಎಂದು ಬರೆದಿರುವುದಕ್ಕೆ ಸ್ವಾಮಿಯವರು ಅಸಮಾಧಾನ ವ್ಯಕ್ತಪಡಿಸುತ್ತಾರೆ. ಕಾಲ್ಡ್‌ವೆಲ್‌ಗೆ ಇತರೆ ದ್ರಾವಿಡ ಭಾಷೆಗಳ ಬಗ್ಗೆ ಜ್ಞಾನವಿದ್ದಿಲ್ಲ. ಆತ ದ್ರಾವಿಡ ಭಾಷೆಗಳೆಲ್ಲೆಲ್ಲ ಕನ್ನಡವೇ ಹಳೆಯದ್ದು ಎಂದು ತೀರ್ಮಾನಿಸಲ್ಪಟ್ಟ ಎಂದು ಸ್ವಾಮಿಯವರು ಹೇಳುತ್ತಾರೆ.

ಕಾಲ್ಡ್‌ವೆಲ್ ತಮಿಳು ಭಾಷೆ ಹಳೆಯದು ಎಂದು ಹೇಳಿದರು. ಆತನು ಕಾಲಮಾನ ಗುರ್ತಿಸಿದ್ದು, ತಮಿಳು ಸಾಹಿತ್ಯ ಗ್ರಂಥಗಳೆಲ್ಲ ೧೦ನೆಯ ಶತಮಾನಕ್ಕೂ ಈಚಿನವು ಎಂದು ಬರೆದಿರುವನು ಎಂದು ಸ್ವಾಮಿಯವರು ವಾದ ಮಂಡಿಸುತ್ತಾರೆ.

**ಇತಿಹಾಸ:**

ತಮಿಳು ಗ್ರಂಥಗಳಲ್ಲಿ ಮೌರ್ಯರ ಕಾಲದ ಬಗ್ಗೆ ವಿವರಣೆ ಇರುವ ಗ್ರಂಥಗಳು ಮೌರ್ಯ ಕಾಲದ ಸಮಯದ್ದು ಎಂಬ ತಮಿಳರ ವಾದಕ್ಕೆ ಸ್ವಾಮಿಯವರು ಮಂಡಿಸುತ್ತಾರೆ. ಮೋರಿಯರ್, ನೋಟ್ರದ್ಕಣ್ಣವರ್ ಎಂಬ ಪದಗಳು ಉಕ್ತವಾಗಿದ್ದರೆ, ಅವು ಮೌರ್ಯ, ಶಾತವಾಹನ ಕಾಲದ್ದು ಎಂಬ ತೀರ್ಮಾನ ಸರಿಯಲ್ಲ. ನಾನು ವೇದ ಕಾಲದ ಕಥೆಯನ್ನು ಕುರಿತು ಬರೆದರೆ ಸ್ವಾಮಿ ವೇದಕಾಲದವರೇ ಎಂಬಂತೆ ಇದೆ ಎಂದು ತರ್ಕ ನೀಡುತ್ತಾರೆ.

ಕಳಭ್ರರು ತಮಿಳರ ಮೇಲೆ ದಾಳಿ ಮಾಡಿ ಸರ್ವಸ್ವವನ್ನೂ ನುಂಗಿದರು ಎಂಬ ವಾದಕ್ಕೆ ಸ್ವಾಮಿಯವರು Kalabhuru Interrengum - A Retorspect and propect. Bull Inst-Trad-Calt-Jon-June ಪತ್ರಿಕೆಯಲ್ಲಿ ಸಂಶೋಧನ ಲೇಖನ ಬರೆದಿದ್ದು ಹೇಳುತ್ತಾರೆ. ಈ ಲೇಖನದಲ್ಲಿ ಕಳಭ್ರರಿಂದ ತಮಿಳು ಸಾಹಿತ್ಯ ನಾಶವಾಗಿಲ್ಲ ಎಂದು ವಾದಿಸಿರುವರು.

ಕಳಭ್ರ ಎಂದರೆ ಗಂಗರು ಎಂದು ಸ್ವಾಮಿಯವರು ಅರ್ಥೈಸಿದ್ದು ಗಂಗರ ದಾಳಿಯಲ್ಲಿ ತಮಿಳು ಸಾಹಿತ್ಯ ನಾಶವಾಗಿಲ್ಲ ಎಂದು ಅಭಿಪ್ರಾಯಪಡುತ್ತಾರೆ.

ಪಾಂಡ್ಯರ ಅರಸರ ಕುರಿತು ಅವರ ಪೂರ್ವಿಕರ ಸಾಧನೆಗಳು ಕುರಿತು ಹೇಳುತ್ತಾರೆ. ೯ನೇ ಶತಮಾನದಲ್ಲಿ ಆಳಿದ ಪರಾಂತಕ ನೆಡುಂಜಡೆಯನ ಪೂರ್ವಿಕರ ಬಗ್ಗೆ ಶಾಸನಗಳಲ್ಲಿ ಆಧಾರಗಳನ್ನು ಈ ರೀತಿ ಮಂಡಿಸಿರುವರು.

"ಕ್ರಿ.ಶ. ೯ನೇ ಶತಮಾನದ ಆದಿಭಾಗದಲ್ಲಿ ಪಾಂಡ್ಯ ನಾಡನ್ನು ಆಳಿದ ಪರಾಂತಕ ನೆಡುಂಜಡೆಯನ ವೇಳ್ವಿಕುಡಿ ಶಾಸನವನ್ನು ಹಿಂದೆ ಪ್ರಸ್ತಾವಿಸಿದ್ದೇನಷ್ಟೆ. ಈ ಅರಸನ ಪೂರ್ವಿಕರ ಸಾಧನೆಗಳು ಅದರಲ್ಲಿ ಉಕ್ತವಾಗಿವೆ.

೧. ಮೇರುವಿನ (ಹಿಮಾಲಯ ಪರ್ವತ) ತುದಿಯಲ್ಲಿ ರಾಜಚಿಹ್ನೆಯಾದ ಮತ್ಸ್ಯದ್ವಯವನ್ನು ಸ್ಥಾಪಿಸಿದ್ದು.
೨. ಇಂದ್ರನ ಸಿಂಹಾಸನದಲ್ಲಿ ಒಂದು ಅರ್ಧವನ್ನೂ ಅವನ ಹಾರವನ್ನು ಕಸುಕೊಂಡದ್ದು.
೩. ಹಾಲ್ಗಡಲನ್ನು ಕಡೆದದ್ದು.
೪. ಅಗಸ್ತ್ಯ ಋಷಿಯಿಂದ ಪಟ್ಟಾಭಿಷಿಕ್ತರಾದದ್ದು. ಇತ್ಯಾದಿ.

ಇದೇ ಸಂಗತಿಗಳು ಕಿರಿಯ ಚಿನ್ನ ಮನೂರು ಶಾಸನದಲ್ಲೂ ಉಲ್ಲೇಖವಾಗಿದೆ. ಕ್ರಿ.ಶ. ೯ನೇ ಶತಮಾನದ ಮಧ್ಯಭಾಗದಲ್ಲಿ ಪಾಂಡ್ಯರಾಜ್ಯವನ್ನಾಳಿದ ಪರಾಂತಕ ವೀರನಾರಾಯಣನ ದಳವಾಯಿಪುರದ ತಾಮ್ರಶಾಸನದಲ್ಲಿ (ಕ್ರಿ.ಶ. ೮೫೬) ಇನ್ನು ಕೆಲವು ಸಂಗತಿಗಳು ಉಕ್ತವಾಗಿವೆ.

೧. ಇಂದ್ರನ ತಲೆಯ ಮೇಲೆ ಬಳೆಯನ್ನು ಒಡೆದದ್ದು.
೨. ರಾವಣನೊಡನೆ ಸಂಧಿಮಾಡಿಕೊಂಡಿದ್ದು.
೩. ಮಹಾಭಾರತ ಯುದ್ದದಲ್ಲಿ ದುರ್ಯೋಧನನ ಸೈನ್ಯವನ್ನು ನಾಶಮಾಡಿದ್ದು ಇತ್ಯಾದಿ.

ಹೀಗೆಯೇ ವೀರಪಾಂಡ್ಯನ ಶಿವಕಾಶಿ ತಾಮ್ರಶಾಸನದಲ್ಲೂ ಹೆಚ್ಚುಕಡಿಮೆ ಇದೇ ಸಂಗತಿಗಳು ಉಲ್ಲೇಖವಾಗಿವೆ.

ತಮಿಳು ಸಂಶೋಧಕರೂ ಸಾಹಿತಿಗಳೂ ಇವೆಲ್ಲವೂ ಚಾರಿತ್ರಿಕ ಸಂಗತಿಗಳು ಎಂದು ವಿಶ್ವಾಸ ತಾಳಿದ್ದಾರೆ."[೨೦]

ಪಾಂಡ್ಯ ರಾಜರ ಪರಾಕ್ರಮಗಳು ಇರುವ ಉಕ್ತಿಗಳು ನೀಡಿದ್ದ ಸ್ವಾಮಿಯವರು ಮೇಲಿನ ಸಂಗತಿಗಳು ಕಾಲ್ಪನಿಕ ಪುರಾಣ ರೂಪದದ್ದು ಎಂದು ವೈಜ್ಞಾನಿಕವಾಗಿ ಚರ್ಚಿಸುತ್ತಾರೆ.

ಚಂಗ ಕಾಲದ ಅರಸರ ಕುರಿತು ಸ್ವಾಮಿಯವರು ಹಲವು ಆಧಾರಗಳ ಮೂಲಕ ಇವರ ಕಾಲವನ್ನು ನಿರ್ಣಯಿಸುವುದಕ್ಕೆ ಚರ್ಚೆಯಾತ್ಮಕವಾದ ವಿವರಣೆಯನ್ನು ನೀಡುತ್ತಾರೆ. ಚಂಗ ಕಾಲದ ಕರಿಕಾಲ ಚೇಳ, ಚೇಳವಂಶದ ಸ್ಥಾಪಕ. ಮೊದಲನೆಯ ಅರಸ ಎಂದು ದಾಖಲೆಗಳಿವೆ. ಸ್ವಾಮಿಯವರು ಚಂಗ ಕಾಲದ ಮತ್ತು ಮಧ್ಯಕಾಲದ ಕರಿಕಾಲ ಬೇರೆ ಎಂದು ಒಪ್ಪುವುದು ಹೇಗೆ ಎಂದು ಪ್ರಶ್ನಿಸುತ್ತಾರೆ.

ಮಧ್ಯಕಾಲದಲ್ಲಿ ಶಾಸನಗಳಲ್ಲಿ ಬರುವ ನುಡಿಗಟ್ಟನ್ನು ವಿಶ್ಲೇಷಣೆ ಮಾಡುತ್ತಾರೆ. "ಕುಳಮುಟ್ರತುತ್ತ ತುಂಜಿಯ ಕಳ್ಳಿವಳವನ್ (ಪುರನೂರು, ಪದ್ಯಗಳು ೩೪, ೪೬, ತುಳಮುಟದಲ್ಲಿ ಮಡಿದ ಕಳ್ಳವಳವನ್) ಎಂಬಂಥ ನುಡಿಗಟ್ಟನ್ನು ಬಳಸಿದರು. ಮಧ್ಯಕಾಲದ ಶಾಸನಗಳಲ್ಲಿ ಇದೇ ನುಡಿಗಟ್ಟನ್ನು ಬಳಸಿದೆ. ತೊಂಡೈಮಾನ್ ಅದ್ರೂರ್ ತುಂಇಯ ಎಡೈಯಾರ್ (SII III NO.42; ತೊಂಡೆಮಂಡಲದ ಆಟ್ಟರಿನಲ್ಲಿ ಮಡಿದ ಒಡೆಯ) ಪೋನ್‌ಮಾಳಿಗೈತ್‌ತ್ತುಂಜಿಯ ತೇವರ್ (SII V NOS723980 ಚಿನ್ನದ ಮಾಳಿಗೆಯಲ್ಲಿ ಮಡಿದವರು"[೨೧] ಎಂಬ ನುಡಿಗಟ್ಟುಗಳನ್ನು ಚರ್ಚಾತ್ಮಕವಾಗಿ ಪರಿಗಣಿಸಿ ಸ್ವಾಮಿಯವರು ಸಾಹಿತ್ಯ-ಶಾಸನ ಭಾಷೆಯಲ್ಲಿ ನುಡಿಗಟ್ಟು ಒಂದೇ ಅಥವಾ ಬೇರೆ ಎಂಬ ವಾದವನ್ನು ನೀಡುತ್ತಾರೆ. ನುಡಿಗಟ್ಟನ್ನು ಕ್ರಿ.ಶ. ೨ನೇ ಶತಮಾನದಲ್ಲಿ ಇದ್ದು ಮುಂದೆ ಮತ್ತೆ ಕ್ರಿ.ಶ. ೮, ೧೦ನೆಯ ಶತಮಾನಕ್ಕೆ ಬಳಕೆಯಿದ್ದರೆ ನಡುವೆ ಏಕೆ ಬಳಕೆ ಇಲ್ಲ ಸ್ವಾಮಿಯವರು ಸಾಹಿತ್ಯ ರಚನೆಯಾಗಿಲ್ಲವೇ ಎಂದು ಪ್ರಶ್ನಿಸುತ್ತಾರೆ.

**ಧಾರ್ಮಿಕ ವಿಚಾರ:**

ನಟರಾಜನ ಕಲ್ಪನೆ ಲೋಕಕ್ಕೆ ತಮ್ಮ ಕೊಡುಗೆಯೆಂದು ತಮಿಳರು ಭಾವಿಸಿದ್ದರು. ಶಿವ ತಮ್ಮ ಆರಾಧ್ಯ ದೈವವೆಂದೂ, ಆದಿ ದೈವವೆಂದೂ ಹೆಮ್ಮೆಯಿಂದ ಹೇಳಿಕೊಂಡು ಬೀಗುತ್ತಿದ್ದರು.

ಹಲವಾರು ವರ್ಷಗಳಿಂದ ಸ್ಥಾಪಿತವಾಗಿದ್ದ ಈ ನಂಬಿಕೆಯನ್ನು ಸ್ವಾಮಿಯವರು ಸಾಕ್ಷ್ಯಾಧಾರಗಳ ಸಹಿತ 'ಚಿದಂಬರಂ ಅಂಡ್ ನಟರಾಜ' (Chidambaram and Nataraja-Problems and Ratinalization) ಎಂಬ ಶೀರ್ಷಿಕೆಯಲ್ಲಿ South Indian Archaeological

Society ಯಲ್ಲಿ ಭಾಷಣ ಮಾಡಿದರು. ಅನಂತರ ಇದರ ಬಗ್ಗೆ ಒಂದು ಸಂಶೋಧನ ಕೃತಿಯನ್ನು ಬರೆದರು. ಅದರಂತೆ ನಟರಾಜನ ಕಲ್ಪನೆ ತಮಿಳರದಲ್ಲ. ಕಾಶ್ಮೀರದ್ದು; ಅಲ್ಲಿನ ಶೈವ ಪ್ರತ್ಯಭಿಜ್ಞ ದರ್ಶನದಲ್ಲಿ ಅದು ಮೊದಲು ಕಾಣಿಸಿಕೊಳ್ಳುತ್ತದೆ. ೧೦ನೇ ಶತಮಾನದಲ್ಲಿ ಕಾಶ್ಮೀರದಲ್ಲಿ ವಿಪ್ಲವವೊಂದು ಉಂಟಾದುದರಿಂದ ಅಲ್ಲಿನ ಜನ ತಂಡತಂಡವಾಗಿ ದಕ್ಷಿಣ ಭಾರತಕ್ಕೆ ವಲಸೆ ಬಂದರು. ಹಾಗೆ ಬಂದ ಒಂದು ಗುಂಪಿನ ಪ್ರತ್ಯಭಿಜ್ಞ ಶಾಖೆಯ ಅನುಯಾಯಿಗಳು ಆಗ ತಮಿಳುನಾಡನ್ನು ಆಳುತ್ತಿದ್ದ ದೊರೆ ಪರಾಂತಕ ಚೋಳನಲ್ಲಿ ಆಶ್ರಯಪಡೆದರು. ತಮ್ಮ ಆಚರಣೆಗಳಿಗೆ ಒಂದು ಕಟ್ಟಡ ಕಟ್ಟಿಕೊಂಡು ಪಂಚರೂಪ ದರ್ಶನದಲ್ಲಿ ಧ್ಯಾನ ಮಾಡತೊಡಗಿದರು. ಹೀಗಾಗಿ ಚಿದಂಬರಂದ ನಟರಾಜನ ಕಲ್ಪನೆ ಕಾಶ್ಮೀರದ್ದೆಂದು ಸ್ವಾಮಿಯವರ ವಾದ.

**ಸಾಂಸ್ಕೃತಿಕ ವಿಚಾರ:**

ದ್ರಾವಿಡ ಸಂಸ್ಕೃತಿ, ಆರ್ಯ ಸಂಸ್ಕೃತಿ ಕುರಿತು ಸ್ವಾಮಿಯವರ ಅಭಿಪ್ರಾಯ ಕುರಿತು ಹೀಗೆ ಇವೆ.

"ತಮಿಳು ರಾಜ್ಯಗಳ ವೈಭವಗಳು ಭಾರತದ ಸಾಂಸ್ಕೃತಿಕ ಚರಿತ್ರೆಯ ಶಿಖರಗಳೆಂದು ಘೋಷಿಸಿ, ದ್ರಾವಿಡ ಸಂಸ್ಕೃತಿಯನ್ನು ಕಾಲ್ಡ್‌ವೆಲ್ ಮೊದಲಾದ ಪಾಶ್ಚಾತ್ಯ ಪಂಡಿತರ ಅಭಿಪ್ರಾಯಗಳ ಆಧಾರದ ಮೇಲೆ, ಕಳೆದುಹೋದ ಕಾಲದಲ್ಲಿ ಆದಷ್ಟೂ ಹಿಂದೆ ಹಿಂದಕ್ಕೆ ತಳ್ಳಿದ್ದಾರೆ. ಆರ್ಯ ಸಂಸ್ಕೃತಿಯನ್ನು ಅನಾಗರಿಕವೆಂದು ಅಲ್ಲಗಳೆದು ದ್ರಾವಿಡ ಸಂಪ್ರದಾಯ ಸಂಸ್ಕೃತಿಗಳ ಮೇಲ್ಮೈಯನ್ನು ಹೊಗಳಿದ್ದಾರೆ."[೨೨] Hardgrave Jr. R.L. 1965 The dravidian Movements ಎಂಬ ಕೃತಿಯಲ್ಲಿ ದ್ರಾವಿಡ ಸಂಸ್ಕೃತಿಯನ್ನು ಮತ್ತು ಆರ್ಯ ಸಂಸ್ಕೃತಿಗಳ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳನ್ನು Hardgrave ನೀಡಿದ್ದು ಸ್ವಾಮಿಯವರು ಇಲ್ಲಿ ಉದಾರಿಸುತ್ತಾರೆ.

ದ್ರಾವಿಡ ಸಂಸ್ಕೃತಿಯು ಆರ್ಯ ಸಂಸ್ಕೃತಿಯಿಂದ ಬೇರೆ. ದ್ರಾವಿಡ (ತಮಿಳು) ಅಂದರೆ ಅರ್ಥದಲ್ಲಿ ಬಳಸಿದ್ದು ,ಸ್ವಾಮಿಯವರು ಅದನ್ನೇ ಆಧಾರವಾಗಿ ಇಲ್ಲಿ ಚರ್ಚೆಮಾಡಿದ್ದು ಕಾಣುತ್ತೇವೆ.

ಒಟ್ಟಿನಲ್ಲಿ ಡಾ.ಬಿ.ಜಿ.ಎಲ್. ಸ್ವಾಮಿಯವರ ಅನೇಕ ಆಧಾರಗಳ ಮೂಲಕ ದ್ರಾವಿಡ, ಸಾಹಿತ್ಯ, ಭಾಷೆ, ಚರಿತ್ರೆಯ ಕುರಿತು ತಮಿಳು ತಲೆಗಳ ನಡುವೆ ಕೃತಿಯಲ್ಲಿ ಹಲವಾರು ಪ್ರಶ್ನೆಗಳ ಅಲೆಯನ್ನು ಎಬ್ಬಿಸಿದ್ದು ಕಾಣುತ್ತೇವೆ. ದ್ರಾವಿಡ ಚಿಂತನೆಯ ಸಂಬಂದಿ ಸ್ವಾಮಿಯವರ ವಾದ, ಚರ್ಚೆ ಮಂಡನೆಯನ್ನು ಪ್ರಸ್ತುತ ಅಧ್ಯಾಯದಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಿದೆ.

## ಕೊನೆಟಿಪ್ಪಣಿಗಳು

೧. ತಮಿಳು ತಲೆಗಳ ನಡುವೆ, ಪು.ಸಂ. ೧೪.

೨. ಅದೇ, ಪುಟ–೧೩

೩. ಅದೇ, ಪುಟ–೧೯.

೪. ಅದೇ, ಪುಟ–೧೯

೫. ಅದೇ, ಪುಟ–೧೯–೨೦

೬. ಅದೇ, ಪುಟ–೨೧

೭. ಅದೇ, ಪುಟ–೨೧

೮. ಅದೇ, ಪುಟ–೨೨

೯. ಅದೇ, ಪುಟ–೩೦.

೧೦. ಅದೇ, ಪುಟ–೩೨.

೧೧. ಅದೇ, ಪುಟ–೪೩

೧೨. ಅದೇ, ಪುಟ–೪೩

೧೩. ಅದೇ, ಪುಟ–೪೭

೧೪. ಅದೇ, ಪುಟ–೫೯

೧೫. ಅದೇ, ಪುಟ–೬೬

೧೬. ಅದೇ, ಪುಟ–೫೪

೧೭. ಅದೇ, ಪುಟ–೫೫

೧೮. ಅದೇ, ಪುಟ–೬೬

೧೯. ಅದೇ, ಪುಟ–೧೫೬.

೨೦. ಅದೇ, ಪುಟ–೮೩

೨೧. ಅದೇ, ಪುಟ–೮೯

೨೨. ಅದೇ, ಪುಟ–೧೮೧.

# ಅಧ್ಯಾಯ ೬

# ವಿಜ್ಞಾನ ಸಾಹಿತ್ಯ

ಬಿ.ಜಿ.ಎಲ್. ಸ್ವಾಮಿಯವರು ಸಾಹಿತಿಯ ಮಗನಾದರೂ ಮನೆಯಲ್ಲಿಯೇ ಸಾಹಿತ್ಯಿಕ ಪರಿಸರವಿದ್ದರು ವೃತ್ತಿಯಿಂದ ಒಬ್ಬ ಸಸ್ಯವಿಜ್ಞಾನಿ ಪ್ರವೃತ್ತಿ ಮಾತ್ರ ಸಾಹಿತ್ಯಿಕವಾಗಿ ಪೂರಕ ನೆಲೆಯನ್ನೊದಗಿಸಿದೆ ಹಾಗಾಗಿಯೇ ಸಾಹಿತ್ಯದಲ್ಲೂ ವಿಜ್ಞಾನದ ಅಂಶಗಳಿವೆ ಮತ್ತು ವಿಜ್ಞಾನವನ್ನು ಸಾಹಿತ್ಯದ ರೂಪದಲ್ಲಿ ಬರೆಯಬಹುದೆಂಬ ಅಂಶವನ್ನು ಅವರು ತಮ್ಮ ಕೃತಿಗಳ ಮೂಲಕ ಸಾಧಿಸಿದರು. ಈ ಹಿನ್ನೆಲೆಯಲ್ಲಿಯೇ ಅವರ ಕೃತಿಗಳನ್ನು ವಿಜ್ಞಾನಸಾಹಿತ್ಯವೆಂದೇ ಗುರುತಿಸಲಾಗಿದೆ. ಸಾಹಿತ್ಯ ಕೃತಿಗಳಲ್ಲಿನ ವಿಜ್ಞಾನ ಚರ್ಚೆ ಪೂರಕ ಅಂಶಗಳಾದರೆ ವಿಜ್ಞಾನವನ್ನು ಸಾಹಿತ್ಯದ ರೂಪವಾಗಿ ಬರೆಯಬಹುದೆಂಬ ಅಂಶ ಪ್ರಧಾನ ಅಂಶವಾಗುತ್ತದೆ. ಈ ಎರಡು ಅಂಶಗಳನ್ನು ಒಟ್ಟಾಗಿ ವಿಜ್ಞಾನಸಾಹಿತ್ಯವೆನ್ನಲಾಗಿದೆ. ತನ್ಮೂಲಕ ವಿಜ್ಞಾನ–ಸಾಹಿತ್ಯಗಳೆರೆಡನ್ನೂ ಅನುಸಂಧಾನ ಮಾಡಿದ ಬಗೆಯನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಅವುಗಳ ಅವಿನಾಭಾವ ಸಂಬಂಧವನ್ನು ಸಾಧಿಸಲು ಪ್ರಯತ್ನಿಸಲಾಗಿದೆ.

ಸಾಹಿತ್ಯದಲ್ಲಿ ಸ್ವಾಮಿಯವರು ವಿಜ್ಞಾನವನ್ನು ಕಂಡುಕೊಂಡ ಬಗೆ ಹಾಗು ವಿಜ್ಞಾನವನ್ನು ಸಾಹಿತ್ಯದ ರೂಪವಾಗಿ ಚರ್ಚಿಸಿದ್ದು ಗಮನಾರ್ಹವಾಗಿದೆ. ಸ್ವಾಮಿಯವರ ವಿಜ್ಞಾನ ಸಾಹಿತ್ಯದ ಬರಹಗಳು ಕೇವಲ ಸಸ್ಯಶಾಸ್ತ್ರವನ್ನೇ ಹೇಳದೆ ಸಸ್ಯಶಾಸ್ತ್ರದೊಂದಿಗೆ ವೈದ್ಯಕೀಯ, ಮನೋವಿಜ್ಞಾನ, ಪ್ರಾಣಿಶಾಸ್ತ್ರ ಹಾಗೂ ಭೂಗೋಳಶಾಸ್ತ್ರವನ್ನು ಒಳಗೊಂಡಿದೆ.

ಪ್ರಸ್ತುತ ಅಧ್ಯಾಯದಲ್ಲಿ ಸ್ವಾಮಿಯವರು ಸಸ್ಯಶಾಸ್ತ್ರದೊಂದಿಗೆ ಇತರರ ವಿಜ್ಞಾನದ ಶಾಖೆಗಳನ್ನು ಮಾನವಿಕ ವಿಜ್ಞಾನದ ಹಿನ್ನೆಲೆಯಲ್ಲಿ ಸಾಹಿತ್ಯ ರೂಪವಾಗಿ ಹೀಗೆ ಚರ್ಚಿಸಿರುತ್ತಾರೆ. ಎಂಬ ಅಂಶಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಹಸಿರುಹೊನ್ನು ಕೃತಿಯು ಸಾಹಿತ್ಯದ ನೆಲೆಯಲ್ಲಿ ಸ್ಪಷ್ಟವಾದ ವಿಜ್ಞಾನದ ಅಂಶಗಳನ್ನು ಬಿತ್ತರಿಸಿದ್ದು ಕಾಣುತ್ತೇವೆ. ಸ್ವಾಮಿಯವರು ಹಲವು ವೈಜ್ಞಾನಿಕ ಅಂಶಗಳನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ. ಅವು ಹೀಗಿವೆ :

ಸಸ್ಯಪ್ರಪಂಚದ ವಿವರಣೆಯನ್ನು ನೀಡುತ್ತಾ ಸಸ್ಯವಿಜ್ಞಾನವನ್ನು ತಮ್ಮ ವಿಧ್ಯಾರ್ಥಿಗಳಿಗೆ ಈರೀತಿ ನೀಡುತ್ತಾರೆ.

"ಸಸ್ಯಪ್ರಪಂಚವನ್ನು ಎರಡು ಮುಖ್ಯಭಾಗಗಳಾಗಿ ವಿಂಗಡಿಸಬಹುದು ನಾಳರಹಿತ, ನಾಳಸಹಿತ ನಾಳ ಎಂದರೆ ಸಸ್ಯ ರಸವನ್ನು ಗಿಡಮರಗಳ ಬೇರಿನಿಂದ ಎಲೆಯ ತುದಿಯವರೆಗೂ ಕೊಂಡೊಯ್ಯುವುದಕ್ಕಾಗಿ ಏರ್ಪಟ್ಟಿರುವ ಕಣಸಮೂಹ ಎಂದರೆ ಅಂಗಾಂಶ (tissue) ಎಂದಿಟ್ಟುಕೊಳ್ಳಿ.

ನಾಳಸಹಿತವಾದ ಪಂಗಡದಲ್ಲಿ ಎರಡು ಒಳಪಂಗಡಗಳಿವೆ – ಬೀಜರಹಿತ, ಬೀಜಸಹಿತ ಈ ಎರಡನೆಯದಲ್ಲಿಯೂ ನಗ್ನಬೀಜ, ಆವೃತಬೀಜಗಳೆಂಬ ಗುಂಪುಗಳಿವೆ. ಮೊದಲನೆಯ ಗುಂಪಿನಲ್ಲಿ ಬೀಜಗಳು ನೇರವಾಗಿ ಕಣ್ಣಿಗೆಕಾಣುವಂತಿರುತ್ತವೆ. ಎರಡನೆಯದಲ್ಲಿ ಅಂಡಕೋಶವೆಂಬ ಭರಣಿಯೊಳಗಡೆ ಅಂಟಿಕೊಂಡಿರುತ್ತವೆ. ನಗ್ನಬೀಜಗಳ ನಾಳೀಯ ಅಂಗಾಂಶ (vaseular tissue) ದಲ್ಲಿರುವ ಕಣಗಳಿಗೆ ರಂಧ್ರಗಳಿಲ್ಲ. ಟ್ರೆಕೀಡ್ (tracheid) ಎನ್ನುತ್ತೇವೆ. ಆವೃತ ಬೀಜಗಳ ನಾಳೀಯ ಅಂಗಾಂಶದ ಟ್ರೆಕೆಡ್(tracheid)ಗಳೂ ಇರುತ್ತವೆ. ಇವುಗಳೊಂದಿಗೆ ಕಲೆತಂತೆ ರಂಧ್ರಪಡೆದ ಕೊಳವೆಗಳಿರುತ್ತವೆ. ಇವುಗಳನ್ನು ವೆಸಲ್ ಎನ್ನುತ್ತೇವೆ."[೧]

ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದ ಹಸಿರುಹೊನ್ನು ಕೃತಿಯಲ್ಲಿ ಬರುವ ಈ ಸಾಲುಗಳಲ್ಲಿ ಸಸ್ಯಶಾಸ್ತ್ರಗಳಲ್ಲಿ ಹಲವು ಅಂಶಗಳು ಸಸ್ಯಗಳ ವಿಧಗಳು ಹಾಗೂ ಬೀಜಗಳು ಯಾವ ರೂಪದಲ್ಲಿ ಇರುತ್ತವೆ ಎಂಬುದನ್ನು ವಿವರಿಸುವ ಈ ಬಗೆಯು ಸಂಪೂರ್ಣವಾದ ಸಸ್ಯಶಾಸ್ತ್ರದ ವಿಷಯದ ವಿವರಣೆಯಂತಿದೆ. ಈ ಕೃತಿಯಲ್ಲಿ ಪುಟ ಸಂಖ್ಯೆ ೨೧೦ ಮತ್ತು ೨೧೨ರಲ್ಲಿ ವೆಸಲ್ ಟ್ರೆಕೀಡ್ ದ ಸೀಳುನೋಟ ಹಾಗೂ ಆವೃತಬೀಜಿಯ ಚೌಬೀನೆಯ ರಚನೆ ಟ್ರೇಕೀಡ್‌ಗಳು ವೆಸಲ್‌ಗಳ ಚಿತ್ರಗಳೊಂದಿಗೆ ವಿವರಣೆಗಳು ನೀಡಿದ್ದು ಅವರ ವೈಜ್ಞಾನಿಕ ಬರಹಕ್ಕೆ ಸಾಕ್ಷಿಯಾಗಿದೆ.

ಇದೇ ಕೃತಿ ಹುಲ್ಲಿನ ಸಂಸಾರಕ್ಕೆ ಸೇರಿದ ಸಸ್ಯದ ಬಗ್ಗೆ ವಿವರಣೆ ನೀಡುತ್ತಾರೆ.

"ಹುಲ್ಲಿನ ಸಂಸಾರಕ್ಕೆ (Gravminae) ಸೇರಿದ ಗಿಡ ಇದು. ಸ್ಪೈನಿಫಿಕ್ಸ್ ರೊಟಂಡಸ್ (Spinifix Rotundus) ಮುಳ್ಳು ಪೊದರಿನ ಆಕಾರದಿಂದಲೇ ಅಥವಾ ಮುಳ್ಳಿನ ಆವಾಂತರದಿಂದಲೂ ಈ ಗಿಡಕ್ಕೆ ತೆಲುಗಿನ ರಾವಣಾ ಮೀಸಾಲು (ರಾವಣನಮೀಸೆ) ಎಂಬ ಬಿರುದು ಸಂದಿದೆ."[೨]

ಸ್ವಾಮಿಯವರು ಸಸ್ಯಶಾಸ್ತ್ರವನ್ನು ಸಾಹಿತ್ಯಿಕವಾಗಿ ಬರೆದ ಬಗೆ ಇಲ್ಲಿ ಕಾಣಬಹುದು ಹುಲ್ಲನ್ನು ರಾವಣನ ಮೀಸೆಗೆ ಹೋಲಿಸಿದ್ದು ಸಾಹಿತಿಕವಾಗಿ ಬರೆದಿದ್ದು ಕಂಡುಬರುತ್ತದೆ. ಇದು ಅವರ ವೈಜ್ಞಾನಿಕ ಸಾಹಿತ್ಯದ ಬರಹಕ್ಕೆ ಸಾಕ್ಷಿಯಾಗಿದೆ.

ಇದೇ ಕೃತಿಯಲ್ಲಿ ಸಸ್ಯಶಾಸ್ತ್ರಜ್ಞರಲ್ಲಿ ಜಿಜ್ಞಾಸೆಯನ್ನು ಕುರಿತ ವಿಷಯಗಳು ಸಸ್ಯಶಾಸ್ತ್ರೀಯ ಭಾಷೆಯಲ್ಲಿ ವಿವರಿಸಿದ್ದು ತುಂಬಾ ಸ್ವಾರಸ್ಯಕರವಾಗಿದೆ. ಅದು ಹೀಗಿದೆ. "ವಿಂಕ ರೋಸಿಯ (Vinca ruseu) ಈ ಗಿಡದ ನಾಮದ್ವಯ ವಿಷಯವಾಗಿ ಸಸ್ಯಶಾಸ್ತ್ರಜ್ಞರಲ್ಲಿ ಅಲ್ಲ ಮತ್ತು ಹೌದುಗಳ ವ್ಯಾಜ್ಯ ನಡೆಯುತ್ತಿದೆ. ಲಾಕ್ನೀರ ಪುಸಿಲ (Luchnira Pusilla) ಎನ್ನುವವರು ವುಂಟು ಲಾಕ್ನೀರ ರೋಸಿಯ (Luchnera roseu) ಎನ್ನುವವರೂ ವುಂಟು! ಕ್ಯಾತರಾಂತಸ್ ರೋಸಿಯಸ್ (Catheronthus Roseus) ಎನ್ನುವವರೂವುಂಟು."[೩]

ಒಂದು ಹೂವಿನ ವಿವಿಧ ಹೆಸರುಗಳು ಹಾಗು ಸಸ್ಯಶಾಸ್ತ್ರಜ್ಞರಲ್ಲಿ ಅದಕ್ಕೆ ನಾಮಕರಣ ಮಾಡಲು ಇರುವ ವ್ಯಾಜ್ಯಗಳು ತಮ್ಮ ವಿಧ್ಯಾರ್ಥಿಗಳಿಗೆ ವಿವಿಧ ಬಗೆಯ ಹೆಸರುಗಳು ಹಾಗು ಅದರ ವೈಜ್ಞಾನಿಕ ರೂಪದ ಹೆಸರುಗಳ ಕುರಿತು ವಿವರಿಸುತ್ತಾರೆ.

ಸ್ವಾಮಿಯವರು ಹಸಿರುಹೊನ್ನು ಕೃತಿಯಲ್ಲಿ ಸಸ್ಯಶಾಸ್ತ್ರದ ವಿವರಣೆಯಲ್ಲದೆ ವೈದ್ಯಕೀಯ ಶಾಸ್ತ್ರದ ವಿಷಯಗಳ ವಿವರಣೆಯನ್ನು ನೀಡುತ್ತಾರೆ.

"ಹಾಡ್‌ಕಿನ್ಸ್ ಡಿಸೀಸ್ (Hadkins Disease) ಎಂಬುದೊಂದು ಕ್ಯಾನ್ಸರ್ ಸಂಬಂಧವಾದ ಒಂದು ರೋಗ : ಜೀವಿತಕ್ಕೆ ಊನ ತರುವಂಥದೇ ಆದರೂ ವಿಧಾನ ಬಹಳ ನಿಧಾನ ಮೊದಮೊದಲು ರೋಗ ವಿದೆಯೆಂಬುದು ಕಂಡುಹಿಡಿಯುವುದೇ ಕಷ್ಟ : ರೋಗಿಗೆ ಬಾದೆಯ ಅರಿವು ಇರುವುದಿಲ್ಲ. ರೋಗ ಅಂಕುಕರಿಸಿದೆಂದು ತಿಳಿಯುವ ಸಾಧನ ವೈದ್ಯನಿಗಿಲ್ಲ."[೪]

ಹಾಡ್‌ಕಿನ್ಸ್ ಡಿಸೀಸ್ (Hodkins disease) ಎಂಬ ಕ್ಯಾನ್ಸರ್ ಗೆ ಸಂಬಂಧಿಸಿದ ರೋಗದ ಸ್ವರೂಪ ಹಾಗೂ ಅದರ ಪರಿಣಾಮ ಹಾಗೂ ವೈದ್ಯಶಾಸ್ತ್ರದಲ್ಲಿ ಅದರ ಗುಣಮುಖವಾಗುವ

ಬಗೆ ಹಾಗೂ ಅದನ್ನು ಅಳೆಯುವ ಬಗೆಯನ್ನು ಸ್ವಾಮಿಯವರು ಕಥೆಯ ರೂಪದಲ್ಲಿ ನಿರೂಪಿಸಿದ್ದು ಕಾಣುತ್ತೇವೆ. ರೋಗದ ಬಾದೆಯು ಹೀಗೆ ಇರುತ್ತದೆ. ಎಂಬುದನ್ನು ಅವರ ವಿಜ್ಞಾನ ಬರಹದಲ್ಲಿ ಅಚ್ಚುಗೊಳಿಸಿದ್ದು ಕಾಣಬಹುದು.

ವೈದ್ಯಕೀಯ ಶಾಸ್ತ್ರದ ಕ್ಯಾನ್ಸರ್‌ಗೆ ಸಂಬಂಧವಾದ ರೋಗದ ಬಗ್ಗೆ ಈ ಕೃತಿಯಲ್ಲಿ ತಮ್ಮ ವಿಧ್ಯಾರ್ಥಿಗಳಿಗೆ ಸ್ವಾಮಿಯವರು ವಿವರಣೆ ನೀಡುತ್ತಾರೆ. "ಲ್ಯೂಕೇಮಿಯ ಎಂಬ ರೋಗದಿಂದ ಪೀಡಿತರಾದವರಿಗೂ ಈ ಚಿಕಿತ್ಸೆಯನ್ನು ಮಾಡಲಾಯಿತು. ಈ ವ್ಯಾದಿಯೂ ದೀರ್ಘವಾಸಿಯೇ! ಕೆಲವು ಸಲ ಯುವಕರನ್ನೂ ಹಿಡಿದುಕೊಂಡು ಬಿಡುತ್ತದೆ. ರಕ್ತವನ್ನು ಸಂಯೋಜಿಸುವ ಅಂಗಾಂಶಗಳಲ್ಲಿ ಕಾಣಿಸಿಕೊಳ್ಳುವ ಕ್ಯಾನ್ಸರ್ ಬಗೆ ಇದು."[೫]

ಕ್ಯಾನ್ಸರ್‌ಗೆ ಸಂಬಂಧಿಸಿದ ಲ್ಯೂಕೇಮಿಯ ರೋಗದ ತೀವ್ರತೆ ಹಾಗೂ ಯುವಕರ ಮೇಲೆ ಪರಿಣಾಮ ಬೀರುವ ಸಂಭವವನ್ನು ಮತ್ತು ಅದು ಮಂದಗತಿಯಲ್ಲಿ ವಾಸಿಯಾಗುತ್ತದೆ. ಹಾಗೂ ಅದು ಮಾನವನ ದೇಹದ ರಕ್ತವನ್ನು ಸಂಯೋಜಿಸುವ ಅಂಗಾಂಶಗಳಲ್ಲಿ ಕಾಣಿಸಿಕೊಂಡು ವಾಸಿಯಾಗಲು ತುಂಬ ಕಷ್ಟವಾದದ್ದು ಎಂಬುದನ್ನು ಸ್ವಾಮಿಯವರು ತಿಳಿಸುತ್ತಾರೆ.

ಸ್ವಾಮಿಯವರ 'ಸಾಕ್ಷಾತ್ಕಾರದ ದಾರಿಯಲಿ' ಹಲವು ವೈಜ್ಞಾನಿಕ ಚಿಂತನೆಗಳು ಮತ್ತು ಬರಹಗಳನ್ನು ಒಳಗೊಂಡ ಕೃತಿಯಾಗಿದೆ. ಈ ಕೃತಿಯಲ್ಲಿ ಸ್ವಾಮಿಯವರು ಸಸ್ಯಶಾಸ್ತ್ರ, ಮನೋವಿಜ್ಞಾನ, ವೈದ್ಯಕೀಯ ಶಾಸ್ತ್ರದ ನೆಲೆಯಲ್ಲಿ ನಿಂತು ಚರ್ಚಿಸುವುದು ಕಾಣುತ್ತವೆ. ಇಲ್ಲಿ ಸಸ್ಯಶಾಸ್ತ್ರದಲ್ಲಿನ ಮುಖ್ಯ ವಿಷಯವಾದ ವಸ್ತು ಸಸ್ಯ ಮಾನವನ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಅದು ಆಮ್ಲಜನಕ ನೀಡುವುದರಿಂದ ತಾಯಿಯಂತೆ ಮುಖ್ಯವಾಗಿದ್ದು ಅದನ್ನು ಮಾನವ ಬೇರೆ ರೀತಿಯಲ್ಲಿ ಹೇಗೆ ಬಳಸಿಕೊಂಡು ವ್ಯಥೆಗೆ ಕಾರಣವಾಗುತ್ತನೆ ಎಂಬ ವಿವರಣೆ ನೀಡಿರುವರು.

ಸಸ್ಯಶಾಸ್ತ್ರದ ನೆಲೆಯಲ್ಲಿ ಹಲವು ಸಸ್ಯಗಳ ಕುರಿತು ಚರ್ಚಿಸುತ್ತಾರೆ. ಅದರ ಜಾತಿ–ಉಪಜಾತಿ ಮತ್ತು ಕುಟುಂಬದ ಕುರಿತು ಪರಿಚಯ ನೀಡುತ್ತಾರೆ. ಅದು ಹೀಗಿದೆ; "ಅಡಿಕೆ, ಈಚಲ, ತೆಂಗು, ಬಗನಿ ಇವೆಲ್ಲ ಸಸ್ಯಶಾಸ್ತ್ರದ ಪ್ರಕಾರ ಒಂದೇ ಬಳಗ (Family)ಕ್ಕೆ ಸೇರಿದವು. ಮೊದಲ ಮೂರು ಮರಗಳು ದೂರದ ನೋಟಕ್ಕೆ ಒಂದೇ ತರನಾಗಿ ಕಾಣುತ್ತವೆ. ತೆಳುವಾದ, ಬರಿದಾದ, ನೀಟಾದ, ನಿಡಿದಾದ ಕಾಂಡ, ತುದಿಯಲ್ಲಿ ಕೆದರು ತಲೆಯಂತೆ ಎಲೆಕುಚ್ಚು ಗರಿಯೊಡೆದ ಹಿರಿಯಲೆಗಳು, ಎಲೆ ಕುಚ್ಚಿಸಿ ಕೆಳಭಾಗದ ಎಲೆಗಳು ಉದುರಿದ ಮೇಲೆ ಆ ಪರ್ಣ ಕೋನಗಳಿಂದ ಹೂಗೊಂಚಲು (ಹೊಂಬಾಳೆ) ಒಡೆಯುತ್ತದೆ.[೬]

ಅಡಿಕೆ, ತೆಂಗು, ಈಚಲದ ಲಕ್ಷಣಗಳನ್ನು ಇಲ್ಲಿ ನೀಡುತ್ತಾರೆ. ಮತ್ತು ಅದರ ಭಾಗಗಳು ಹೀಗೆ ಇವೆ ಎಂಬುದು ತಿಳಿಸುತ್ತಾ ಸಸ್ಯಶಾಸ್ತ್ರದ ಭಾಷೆಯನ್ನು 'ಬಳಗ' ಎಂದು ಕರೆದಿರುವುದು ಸಾಹಿತ್ಯದ ಓದುಗನಾಗಿ ಸಸ್ಯಶಾಸ್ತ್ರವು ಸರಳವಾಗಿ ತಿಳಿಯಲಿ ಎಂಬ ಉದ್ದೇಶ ಕಾಣುತ್ತದೆ. ಸಸ್ಯಶಾಸ್ತ್ರವನು ಸರಳವಾದ ಸಾಹಿತಿಕ ಬಾಷೆಯಲ್ಲಿ ವಿವರಿಸದ್ದು ಕಾಣಿಸುತ್ತದೆ.

ಸಾಹಿತ್ಯ ಇತಿಹಾಸದಲ್ಲಿ ವಿಜ್ಞಾನದ ಕುರುಹುಗಳನ್ನು ಪತ್ತೆಹಚ್ಚಿ ಅದನ್ನು ಸರಳವಾದ ರೀತಿಯಲ್ಲಿ ವಿವರಿಸುವ ಹಲವು ವೈಜ್ಞಾನಿಕ ಅಂಶಗಳು ಈ ಕೃತಿಯಲ್ಲಿವೆ. ಅಂತಹ ಒಂದು ಅಂಶ ಹೀಗಿದೆ. "ಕಾಳಿಕಾ ಪುರಾಣದಲ್ಲಿ ಶಣನಾರಿನ ಬಟ್ಟೆಯನ್ನು ಅದೇ ಗಿಡದಿಂದ ಉತ್ಪನ್ನವಾದ ಭಂಗಿವನ್ನೂ ಕಾಳಿಗೆ ಸಮರ್ಪಿಸಿದ ಸಂಗತಿ ಲಿಖಿತವಾಗಿದೆ. ಚರಕ ಸುಶ್ರುತರ ಪ್ರಕಾರ ಶಣದ ರೋಗಿಗೆ ಭೇದಿಯನ್ನು ನಿಲ್ಲಿಸುವ ಗುಣವಿದೆ ಅದೇ ಗಿಡದ ದಾರ (ನಾರು) ಶಸ್ತ್ರಚಿಕಿತ್ಸೆಯಲ್ಲಿ ಗಂಟು ಕಟ್ಟುವುದಕ್ಕೆ ಉಪಯೋಗವಾಗಿದೆ."[೭]

ಕಾಳಿಕಾ ಪುರಾಣದಲ್ಲಿ ಭಂಗಿಗಿಡವು ಉಲ್ಲೇಖವಾದ ಬಗೆಯದು ವಿವರಿಸುತ್ತಾ ಅದು ಭೇದಿ ನಿಲ್ಲಿಸುತ್ತದೆ ಎಂಬ ಆರ್ಯವೇದಿಯ ಅಂಶವನ್ನು ಮತ್ತು ಭಾರತದ ಪ್ರಾಚೀನ ಶಸ್ತ್ರ ಚಿಕಿತ್ಸಾಕಾರದ ಚರಕ, ಶುಶ್ರೂತರು, ಶಸ್ತ್ರಚಿಕಿತ್ಸೆಯ ನಂತರ ಅದು ಕಟ್ಟಲು ಬಳಸುತ್ತಿದ್ದರು ಎಂಬ ಅಂಶಗಳನ್ನು ಸ್ವಾಮಿಯವರು ಹೇಳುತ್ತಾರೆ. ಇಲ್ಲಿ ಸ್ವಾಮಿಯವರ ಬರಹವು ಪುರಾಣ ಇತಿಹಾಸ ಮತ್ತು ಆರ್ಯವೇದ ಮೂರು ಅಂಗಳನ್ನು ಏಕೀಕೃತಗೊಳಿಸಿದ್ದು ಕಾಣುತ್ತವೆ.

ಸ್ವಾಮಿಯವರು ಸಸ್ಯದ ಹಿನ್ನೆಲೆಯಲ್ಲಿ ಮನೋವಿಜ್ಞಾನವು ಸೇರಿಸಿಕೊಂಡು ಬರೆದಿರುವ ಅಂಶಗಳು ಈ ಕೃತಿಯಲ್ಲಿವೆ. ಮೆಕ್ಸಿಕೋ ಮಧ್ಯ ಅಮೇರಿಕಾದ ಜನರು ಕ್ಯಾಕಟಿನ್ ಕಳ್ಳಿಯನ್ನು ಅಗೆಯುವುದು ಮತ್ತು ದಕ್ಷಿಣ ಅಮೇರಿಕಾದ ಅಸೆಟಿಕ್ ಜನಾಂಗ ಒಲೋಲಿಯು ಎಂಬ ಬೀಜಗಳನ್ನು ಮಾದಕ ವಸ್ತುಗಳಾಗಿ ಉಪಯೋಗಿಸಿಕೊಂಡ ಬಗ್ಗೆ ಇಲ್ಲಿ ಚಿತ್ರಿಸಿದ್ದಾರೆ.

"ಸಾಧಾರಣಾ ಮಾನವನಲ್ಲಿ ಈ ಮೂಲಿಕೆಗಳ (ಗಾಂಜಾವನ್ನೂ ಸೇರಿಸಿ) ಸೇವನೆಯಿಂದ ಅವನ ಸೀಳುವ್ಯಕ್ತಿತ್ವ (Split Personality) ವು ತನ್ನ ವ್ಯಕ್ತಿತ್ವದಿಂದ ಹೊರಬಂದ ಬೇರೊಂದು ಲೋಕದಲ್ಲಿ ವಿವರಿಸುವಂಥ ಅನುಭವ ಉಂಟಾಗುತ್ತದೆ. ಈ ಹೊಸ ಲೋಕ ಸ್ವರ್ಗದಂತಿರಬಹುದು. ನರಕದಂತಿರಬಹುದು. (ಮಿತ ಸೇವನೆ ಸ್ವರ್ಗ, ಅತಿ ಸೇವನೆ ನರಕ) ಬೆಡಗಿನ ಕನಸುಗಳು ಸೌಂದರ್ಯಮಯವಾಗಿರಬಹುದು, ಭಯೋತ್ಪಾದವಾಗಿರಬಹುದು, ಅನುಭವವೂ ಅಸದೃಶ್ಯವಾದದ್ದು, ಅನಿರೀಕ್ಷಿತವಾದದ್ದು ಒಂದೇ ವ್ಯಕ್ತಿಯಲ್ಲಿ ಬೇರೆ ಬೇರೆ ಸಮಯಗಳಲ್ಲಿ ಬೇರೆ ಬೇರೆ ಅನುಭವಗಳನ್ನು ತರುವಂಥದು."[೮]

ಮಾದಕ ವಸ್ತುಗಳು ಮೆಕ್ಸಿಕೋ ಅಮೇರಿಕಾದ ಜನರು ಸೇವಿಸಿ ಹೇಗೆ ಅನುಭವ ಪಡೆಯುತ್ತಾನೆ. ಎಂದು ಮನೋಜ್ಞಾನಿಕ ನಲೆಯಲ್ಲಿ ಸ್ವಾಮಿಯವರು ಚರ್ಚಿಸಿದ್ದು ವ್ಯಕ್ತಿಯು ಕ್ಷಣಿಕ ಸುಖಕ್ಕಾಗಿ ಕಲ್ಪನ ಜೀವನದ ಹಗಲುಗನಸು ಕಾಣಲು ದುರ್ಬಲ ಮನಸ್ಸಿನವರು ಹೇಗೆ ಮಾಧಕ ವಸ್ತುಗಳಿಂದ 'ಸುಖದ ಅನುಭವ' ಆರೋಗ್ಯದ ದುರ್ಲಾಭ ಪಡೆಯುತ್ತಾರೆ. ಎಂಬುದಕ್ಕೆ 'ಸೌಂದರ್ಯಮಯ', 'ಭಯೋತ್ಪಾದಕ' ಎಂದು ಎರಡು ಶಬ್ದಗಳು ನೀಡಿರುವರು. ಸಿಗ್ಮಂಡ್ ಪ್ರಾಯ್ಡ್‌ನ್ ಸಿದ್ದಾಂತಗಳಲ್ಲಿರುವ ಅಂಶಗಳಂತೆ ಸ್ವಾಮಿಯವರ ಬರಹ ಗೋಚರವಾಗುತ್ತದೆ.

ಸ್ವಾಮಿಯವರು ವಿದ್ಯಾರ್ಥಿಯಾಗಿದ್ದ ಸಂದರ್ಭದಲ್ಲಿ ಶೈಕ್ಷಣಿಕ ಪ್ರವಾಸದ ಅನುಭವ ದಾಖಲೆಯಾದ ದೌರ್ಗಂಧಿಕಾಪಹರಣ ಕೃತಿಯು ಹಲವು ವೈಜ್ಞಾನಿಕ ಅಂಶಗಳನ್ನು ಒಳಗೊಂಡಿದೆ. ಸ್ವಾಮಿಯವರು ಸಾಹಿತ್ಯದ ನೆಲೆಯಲ್ಲಿ ಇಲ್ಲಿಯೇ ಕೂಡ ತಾವು ಅಧ್ಯಯನಕ್ಕೆ ಕಂಡಕೊಂಡ ಸಸ್ಯಗಳ ಬಗ್ಗೆ ವಿವರಣೆಯನ್ನು ನೀಡುತ್ತಾರೆ. ಅವರ ಬರಹದ ವೈಜ್ಞಾನಿಕ ಅಂಶಗಳು ಈ ರೀತಿಯಾಗಿವೆ.

"ಮಲಯ ದೇಶದ ಡೂರಿಯೇ ಸಿಬೆತಿನುಸ್ (Durio Zibethinus) ಎಂಬೊಂದು ಮರ ಬೆಳೆಯುತ್ತದೆ ಸಾಮಾನ್ಯ ಬಾಷೆಯಲ್ಲಿ ಡೋರಿಯನ್ ಎನ್ನುತ್ತಾರೆ. ಬರ್ಮಾ ಈಸ್ಟ್ ಇಂಡೀಸ್ ಪ್ರದೇಶಗಳಲ್ಲಿ ಸ್ವಲ್ಪ ಹರಡಿಕೆ ಸ್ವಾಭಾವಿಕ ಪ್ರದೇಶಗಳೆಲ್ಲೇ ಕೃಷಿಗಾಗಲಿ ನೆಡು ತೋಪೆಗಾಗಲ್ಲಿ ಜಗ್ಗದಜಾಯಾಮಾನ ಇದರದು ಹುಟ್ಟಿದೆಡೆಯಲ್ಲೇ ಬೀಜಗಳನ್ನು ಸುರಿಸಿ ಅವು ಬೆಳೆದು ಹಿರಿಯದಾಗ ಬೇಕೆಂದು ಇದಕ್ಕೆ ಸುಮಾರು ೮೦ ಅಡಿ ಎತ್ತರ ನೆಟ್ಟಗೆ ಬೆಳೆಯುತ್ತದೆ. ತುಂಬ ತೆಳ್ಳಗಿರುತ್ತವೆ. ನೋಡುವುದಕ್ಕೆ ಗಂಭೀರವಾಗಿರುತ್ತವೆ. ಎಲೆ ಹಿಂಬದಿಯನ್ನು ಹೊನ್ನು ಬಣ್ಣದ ರೋಮಗಳು ಆವರಿಸಿರುತ್ತದೆ. ಹೂವಿನ ಬೂಹಳದಿ, ಇಲ್ಲವೆ ಹಸುವಿನ ತುಪ್ಪದ ಛಾಯೆ, ಆರೆಂದಗುರಿ ವ್ಯಾಸದ ಹಣ್ಣು ಮುಳ್ಳು, ಮೈಸಲನಿನಂತೆ."[೫]

ಸ್ವಾಮಿಯವರು ಮಲಯ ದೇಶದಲ್ಲಿ ಬೆಳೆಯುವ ಮರದ ಹೆಸರು ಮತ್ತು ಆ ಪ್ರದೇಶದ ಸಸ್ಯವರ್ಗದಲ್ಲಿ ಡೂರಿಯೋಸ್ ಬೆತಿನುಸ್ ಗಿಡದ ಸ್ವಭಾವವನ್ನು ಹೇಳಂತಲೇ ಆ ನೆಲದ ಮಣ್ಣಿನ ಗುಣ ಮುಂತಾದವುಗಳಿಂದ ಭೂಗೋಳ ಶಾಸ್ತ್ರದ ವಿವರಣೆಯನ್ನು ಕೊಟ್ಟಿದ್ದಾರೆ. ಮುಂದುವರೆದು ಅದರ ಭಾಗಗಳು ಲಕ್ಷಣಗಳು ವಿವರಿಸುತ್ತಾ ಸಾಗುವುದು ಸಸ್ಯವಿಜ್ಞಾನದಾಗಿರುತ್ತದೆ. ಇಲ್ಲಿ ಸ್ವಾಮಿಯವರು "ಡೂರಿಯೋ ಸಿಬೇತಿನುಸ್" ಬೆಳೆಯೂ ಪ್ರದೇಶ ಹಾಗೂ ಅದರ ಲಕ್ಷಣವನ್ನು ಹೇಳುತ್ತಾರೆ.

ಸ್ವಾಮಿಯವರ ವೈಜ್ಞಾನಿಕ ಬರಹಕ್ಕೆ ಇದೇ ಕೃತಿಯ ಇನ್ನೊಂದು ಅಂಶವನ್ನು ನೀಡಬಹುದು. "ಇದೊಂದು ಅಪರೂಪವಲ್ಲದಿದ್ದರೂ ಪ್ರಾಚೀನ ಕಾಲದಿಂದ ಭಾರತದ ವೈದ್ಯ ಗ್ರಂಥಗಳಲ್ಲಿ ಉತ್ತರಾಗಿರುವ ಮೇಲೆ ಲೋಂಧ್ರ (Symplocos Lourina) ಹೂಗಳಿಗೆ ಔಷಧೀಯ ಗುಣವಿದೆ. ಚರಕನ ಕಾಲದಿಂದಲೂ ಬಳಕೆಯಲ್ಲಿರುವ ಸರಕು."[೧೦]

ಸ್ವಾಮಿಯವರು ಲೋಂಧ್ರ ಮರದ ಕುರಿತು ಬರೆಯುತ್ತಾ ವೈದ್ಯಶಾಸ್ತ್ರದಲ್ಲಿ ಸಸ್ಯಗಳ ಉಪಯೋಗ ಮತ್ತು ಸಸ್ಯಶಾಸ್ತ್ರ ಮತ್ತು ವೈದ್ಯಶಾಸ್ತ್ರದ ಸಮ್ಮಿಲನ ಆರ್ಯುವೇದವಾಗಿರುವುದು ಕಂಡುಬರುತ್ತದೆ. ಇದಕ್ಕೆ ಪುಷ್ಠಿ ನೀಡುವಂತೆ ಸ್ವಾಮಿಯವರು ಚರಕನ ಕಾಲದಲ್ಲಿಯೋ ಈ ಹೂ ಔಷಧಿಯ ಗುಣ ಹೊಂದಿದೆ ಎಂಬುದು ಹೇಳುತ್ತಾರೆ.

ಸ್ವಾಮಿಯವರು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕೊಟ್ಟ ಉಪನ್ಯಾಸದ ಬರಹ ಶಾಸನಗಳಲ್ಲಿ ಗಿಡಮರಗಳು ಕೃತಿಯು ಹಲವು ಶಾಸ್ತ್ರಗಳನ್ನು ಒಳಗೊಂಡಿದೆ ಇದರಲ್ಲಿ ಸಸ್ಯಶಾಸ್ತ್ರ ಸಂಬಂಧಿ ವೈಜ್ಞಾನಿಕವಾದ ಕೆಲ ಅಂಶಗಳನ್ನು ಇಲ್ಲಿ ಉದಾಹರಿಸಲಾಗಿದೆ.

"ಈ ಮೂರು ಬೇರೆ ಬೇರೆ ಜಾತಿಯ ಗಿಡಗಳು ಮೊದಲನೆಯದು (Artemesiavulguris Composite) ಬಳಕ್ಕೆ ಸೇರಿದ್ದು ಎರಡನೇಯದ್ದು (Origanum Marjarunum Lubiate) ಬಳಗಕ್ಕೆ ಸೇರಿದ್ದು ಮೂರನೆಯದ್ದು Artemesia Pallens ಇದೂ ಮೊದಲನೆಯದರಂತೆ Composite ಬಳಗದ್ದು."[೧೧]

ಮಾಚಪತ್ರೆ, ಮರಗಿ, ದವನ, ಈ ಮೂರು ಸಸ್ಯಗಳು ಯಾವ ಬಗೆಯದ್ದು ಮತ್ತು ಅದರ ವೈಜ್ಞಾನಿಕ ಹೆಸರುಗಳು ಹಾಗೂ ಯಾವ ಪ್ರಭೇಧಕ್ಕೆ ಸೇರುತ್ತವೆ ಮತ್ತು ಅವು ಯಾವ ಕುಟುಂಬಕ್ಕೆ ಸೇರುತ್ತವೆ. ಎಂಬುದನ್ನು ವೈಜ್ಞಾನಿಕವಾಗಿ ತಿಳಿಸಿಕೊಡಿರುತ್ತಾರೆ. ಹೀಗೆ ಶಾಸನಗಳಲ್ಲಿ ಗಿಡ ಮರಗಳು ಇಂತಹ ಅನೇಕ ಉದಾಹರಣೆಗಳಿಂದ ಕೂಡಿದ್ದು ಕಾಣಬಹುದು.

ಬೃಹದಾರಣ್ಯಕ ಹಲವು ವೈಜ್ಞಾನಿಕ ಅಂಶಗಳನ್ನು ನೀಡುತ್ತದೆ. ಸ್ವಾಮಿಯವರ ಕಾಡುಮರಗಳು ಮತ್ತು ಕಾಡುಪ್ರಾಣಿಗಳ ಕುರಿತು ಬರೆಯುವಾಗ ಹಲವು ವೈಜ್ಞಾನಿಕ ಅಂಶಗಳನ್ನು ಚರ್ಚಿಸಿರುವುದು ಕಂಡುಬರುತ್ತದೆ. ಸ್ವಾಮಿಯವರ ನೀಡಿದ ವೈಜ್ಞಾನಿಕ ಅಂಶಗಳಲ್ಲಿ ಕೆಲವು ಇಲ್ಲಿ ಚರ್ಚಿಸಲಾಗಿದೆ.

ಭೋನ್‌ಸಾಯ್ ಮರದ ಕುರಿತು ಪರಿಚಯ ನೀಡುತ್ತಾ ಸಸ್ಯ ವಿಜ್ಞಾನದ ಭೋಧನೆ ಮಾಡುವ ರೀತಿ ಇಲ್ಲಿದೆ "ಕಾಂಡದ ಸುತ್ತಳತೆಯ ಬೆಳವಣಿಗೆ ಇನ್ನೊಂದು. ತೊಗಟೆಯ ಒಳಮೈಯಲ್ಲಿ ಚಿರಂಜೀವಿಯಾಗಿರುವ ಸ್‌ಲ್ ಸದರಗಳು ಪದರುಗಳಿಗೆ ಕಾಂಬಿಮ್ ಎಂದು ಹೆಸರು."[೧೨]

ಬೋನ್ ಸಾಯ್ ಮರದ ಲಕ್ಷಣವನ್ನು ಹಾಗೂ ಅದರ ಅಜೀವಿ ಕೋಶಗಳ ಪದರುಗಳಿಗೆ ಸಸ್ಯ ಶಾಸ್ತ್ರದಲ್ಲಿ ಕಾಂಬಿಮ್ ಎಂದು ಕರೆಯುತ್ತಾರೆ. ಎಂದು ಅದರ ವಿವರಣೆ ನೀಡಿರುತ್ತಾರೆ. ಆದರ ಕಾಂಡದ ಕುರಿತು ಅದರ ಸೀಳಿಕೆಯ ನೋಟದ ಬಗ್ಗೆ ಹೀಗೆ ವಿವರಿಸುತ್ತಾರೆ. "ಸಸ್ಯ ವಿಜ್ಞಾನಿಗಳು 'ವಾರ್ಷಿಕವರ್ತುಲ' (Omulring) ಎನ್ನುತ್ತಾರೆ. ನಮ್ಮ ತೇಗ (Tectonagrandis) ಗಂದರಿಗೆ (Cendrela toona) ಮೊದಲಾದ ಮರಗಳನ್ನು ಅಡ್ಡ ಸೀಳಿದಾಗ ಈ ಸಹಿಗಳು ಬರಿಗಣ್ಣಿಗೆ ಗೋಚರವಾಗುತ್ತವೆ"[೧೩] ಎಂದು ತೇಗ, ಗಂದರಿಗೆ, ಮರದೊಂದಿಗೆ ಬೋನ್ ಸಾಯ್ ಮರ ಹೋಲಿಕೆಯನ್ನು ನೀಡುತ್ತಾರೆ. ಮತ್ತು ಅವುಗಳಿಗೆ ಸಸ್ಯಶಾಸ್ತ್ರದ ಹೆಸರುಗಳು ಆಂಗ್ಲ ಅಕ್ಷರದಲ್ಲಿ ನೀಡುತ್ತಾರೆ.

ಪ್ರಾಣಿಗಳ ಕುರಿತು ಬರೆಯುತ್ತಾ ಜಿಬ್ರ, ಕಿರುಬ, ಚಿರತೆಯನ್ನು ಪ್ರಾಣಿಸಸ್ಯಶಾಸ್ತ್ರಜ್ಞರು ಹೇಗೆ ವಿಂಗಡಿಸಿರುವರು ಎಂಬುದು ವಿವರಿಸುತ್ತಾರೆ. "ಪ್ರಾಣಿ ಶಾಸ್ತ್ರಜ್ಞನ ಖಯಾಲಿ ಎರಡನ್ನೂ ಬೇರೆ ಬೇರೆ ಸ್ಪಿಪೀಸುಗಳೆಂದು ಪರಿಗಣಿಸುತ್ತಾನೆ. ಫೆಲಿಸ್, ಪಾರ್ಡಸ್-ಇಬ; ಫೆಲಿಸ್ ಲಿಯೋಪಾರ್ಡಸ್-ಕಿರುಬ ಇನೆರಡು ಒಂದೇ ಸ್ಪೀಪಿಸಿನ ಎರಡು ರಬಮುಗಳು ಎಂದು ಭಾವಿಸುವರು."[೧೪]

ಖಯಾಲಿಯು ಕಿರುಬ ಇಬದ ವರ್ಗೀಕರಣ ಹೇಗೆ ಮಾಡಿರುವರು ಎಂಬುದು ಮತ್ತು ಈ ಎರಡು ಪ್ರಾಣಿಗಳು ಒಂದೇ ಪ್ರಭೇದಕ್ಕೆ ಸೇರಿದವು ಎಂದು ಹೇಳಿದ್ದು ಸ್ವಾಮಿಯವರು ಸರಳವಾಗಿ ವಿವರಣೆ ನೀಡಿದರು.

ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾದ ಕೃತಿಯು ವೈಜ್ಞಾನಿಕವಾದ ಹಲವು ಅಂಶಗಳನ್ನು ಹಾಕಿದೆ. ಅವುಗಳಲ್ಲಿ ಒಂದು ಹೀಗಿವೆ ೧೭ನೇ ಶತಮಾನದ ಯುರೋಪಿನಲ್ಲಿ ಆಲೂ ಕಾಮೋದಿಪಕವೆಂದು (ಅಪ) ಖ್ಯಾತಿ ಪಡೆಯಿತು. ಹೊರ ದೇಶದಗಳಿಂದ ಆಮದಾದ ಗಿಡಗಳಿಗೆ ಹಿತ್ತಲು ಜನ ಸಾಮಾನ್ಯವಾಗಿ ಸಲ್ಲಿಸುವ ಗೌರವಗಳಲ್ಲಿ ಇದೊಂದು ನಮ್ಮ ಭಾರತವನ್ನೇ ಉದಾಹರಣೆಯಾಗಿ ತೆಗೆದುಕೊಳ್ಳಿ ಕಾಫಿ ಕುಡಿಯುವುದರಿಂದ ಲೈಂಗಿಕ ಪಿಪಾಸೆ ಅಧಿಕಸುತ್ತದೆ ಎಂದು ಅಪಾವದವನ್ನು ೧೯ನೇ ಶತಮಾನದಲ್ಲಿ ಹಬ್ಬಿಸಿರಲಿಲ್ಲವೇ.[೧೫]

ಹೊರ ದೇಶದಿಂದ ಆಮದಾದ ಆಹಾರ ಪದಾರ್ಥಗಳು ಅನುಮಾನದ ದೃಷ್ಟಿಯಿಂದ ನೋಡುತ್ತಾರೆ ಎಂಬ ಅಂಶವನ್ನು ತಿಳಿಸುತ್ತಾರೆ. ಸಸ್ಯಶಾಸ್ತ್ರದ ಹಿನ್ನೆಲೆಯಲ್ಲಿ ಅಲೂ ಅಥವಾ ಕಾಫಿ ಕಾಮೋದ್ರೇಕ ಗುಣ ಅದರಲ್ಲಿ ಇಲ್ಲಿ ಎಂಬ ಅವರ ಬರವಣೆಗೆ ವಿಜ್ಞಾನದ ಮಹತ್ವ ತೋರಿಸಿದೆ.

ಫಲಶ್ರುತಿಯು ಹಲವು ಫಲ ಪುಷ್ಪಗಳ ವಿವರಣೆಯನ್ನು ಸಾಹಿತಿಯಾಗಿ ದೂರ ಹಾಕಿದ್ದು ಕಾಣಬಹುದು ಲಕ್ಷಣವನ್ನು ಸಸ್ಯಶಾಸ್ತ್ರದ ಹಿನ್ನೆಲೆಯಲ್ಲಿ ಸಾಹಿತಿಕ ಬಾಷೆಯಲ್ಲಿ ಹೇಳುತ್ತಾರೆ.

"ಎಲೆಗಳು ಉದುರಿ ನಗ್ನವಾಗಿ ಕಾಣಿಸಿಕೊಂಡಗಲೂ ಕೊಂಬೆ ರೆಂಬೆಗಳ ಹರವು ವಿನ್ಯಾಸ ಚೆಲುವಾದ ನೋಟ, ಹೊಸ ಎಲೆಯ ಕೊನರುವ ಮೊದಲೇ ಹೊಂಗೊಂಚಲು ಅರಳುತ್ತದೆ. ಮರವೇ ಹೂವಿನ ಬೆಟ್ಟದಂತೆ ಕಂಗೊಳಿಸುತ್ತದೆ. ಮುಗಿಲಿಗೆ ಹೂವಿನಾರತಿಯ ಎತ್ತುತ್ತಿದೆ. ಹೂ ಬಣ್ಣ ಮರದಿಂದ ಮರಕ್ಕೆ ವ್ಯತ್ಯಾಸವಾಗುತ್ತದೆ. ಬಿಳಿ, ತಿಳಿಹಳದಿ ಮತ್ತು ಕೆಂಪು ಛಾಯೆಯ ಹಳದಿ ಈ ವ್ಯತ್ಯಾಸ ರಖಮುಗಳ ಕುರಿತು ಈ ಫಲಶ್ರುತಿ."[೧೬]

ದೇವರಣಗಿವೆಯನ್ನು ವರ್ಣನೆ ಮಾಡುತ್ತಾ ಸ್ವಾಮಿಯವರು ಅದರ ಭಾಗಗಳನ್ನು ಗುರ್ತಿಸಿ ಹೇಳುತ್ತಾರೆ. ಮತ್ತು ಅದರ ಲಕ್ಷಣವನ್ನು ಹಾಗೂ ಅದರ ರಬಮು ಅಂದರೆ ಪ್ರಭೇಧಗಳ ವ್ಯತ್ಯಾಸ ಕುರಿತು ಹೇಳುತ್ತಾರೆ. ಹಲವಾರು ವಿಮರ್ಶಕರು ತಮ್ಮ ಲೇಖನಗಳಲ್ಲಿ ಅತ್ಯುತ್ತಮ ಮಾಹಿತಿಯನ್ನು ಕೊಟ್ಟಿದ್ದಾರೆ. ವಿವರ ಇಂತಿದೆ.

ಕದಂಬ, ಲಿಂಗ ಜಾತಿಯ ಪರಸ್ಪರ ಪರಿಣಾಮ ಅರ್ಜಿತೆ ಗುಣಗಳು ಅನುವಂಶೀಯತೆ ಸಸ್ಯಜೀವಿ ಪ್ರಾಣೀಯ ಮೀನಾಕ್ಷಿಯ ಸೌಗಂಧ, ಕದಂಬ, ಜೇಡರ ಚರಕ, ಪ್ರಣಯ ಪ್ರಸಂಗ, ಪ್ಲಾಟಿಪಸ್, ಹಸುವಿನ ಬಳ್ಳಿ, ಸಂತಾನ ರಹಸ್ಯ, ಗಿಣಿಯ ಹಸಿರು, ಎಲೆಹಸಿರು ಮುಂತಾದವುಗಳನ್ನು ಸ್ವಾಮಿಯವರು ಗಂಭೀರವಾದ ಸಂಕ್ಷಿಪ್ತ ಮಾಹಿತಿಯನ್ನು ಸಂಪೂರ್ಣ ವಿಷಯವಸ್ತುನೊಂದಿಗೆ ನೀಡಿದ್ದು, ಸಾಹಿತಿಕವಾಗಿ ವಿಜ್ಞಾನ ಲೇಖನಗಳನ್ನು ಬರೆದಿದ್ದು ಭೂತಪೂರ್ವವಾಗಿದೆ.

ಅನುವಂಶೀಯಂತೆಯ ಅರ್ಜಿತ ಗುಣಗಳು ಲೇಖನದಲ್ಲಿ ಅರ್ಜಿತಗುಣಗಳು ಅನುವಂಶೀಯವಾಗಿ ಬರುತ್ತವೆ. ಮೇಧಾವಿಗಳ ಮಕ್ಕಳು ಮೇಧಾವಿಗಳು ಆಗುತ್ತಾರೆ ಎಂಬ ವಾದವನ್ನು ಚರ್ಚಿಸುತ್ತಾ ತಂದೆಯ ಗುಣವನ್ನು ಅನುಕರಿಸಬೇಕೆಂಬ ಕಾತರತೆ ಮಗನ ಪ್ರಜನನ ವಸ್ತುವಿನಲ್ಲಿ ಅನುವಂಶೀಯವಾಗಿ ಬಂದಿದೆ ಅಷ್ಟೆ. ಅದನ್ನು ಬೆಳೆಸಿಕೊಳ್ಳವ ಅವಕಾಶ ಅನುಕೂಲವಾದ ಸನ್ನಿವೇಶ ಆ ಮಕ್ಕಳ ಬೆಳವಣಿಗೆ ಸಿಕ್ಕರೆ ಅವರು ತಂದೆಯಂತೆ ಉತ್ತಮ ಗುಣವುಳ್ಳವರಾಗುತ್ತಾರೆ ಎಂಬ ಚರ್ಚೆಯನ್ನು ಸ್ವಾಮಿಯವರು ಅರ್ಜಿತ ಗುಣಕ್ಕಿಂತ ಪರಿಸರದ ಪ್ರಭಾವ ಮುಖ್ಯ ಎಂದು ಹೇಳುವುದು ಮನೋವಿಜ್ಞಾನದ ಚರ್ಚೆಯಾಗಿದೆ.

ಲಿಂಗಜಾತಿಗಳು ಪರಿಸ್ಪರ ಪರಿಮಾಣ (Sex Retio) ಕುರಿತದ್ದು ಈ ಲೇಖನದಲ್ಲಿ ಜೀವಕ್ಕೆ ಆಧಾರವಾಗುವ (Living cells) ಜೀವರಸ (Protoplutinum) ಜೀನ್ (Gine)

ವರ್ಣರೇಖೆ (Chromosome) ಅಂತ್‌ಬೀಜ್ ಇವುಗಳ ಕುರಿತು ಮನೋಜ್ಞಾನದ ನೆಲೆಯಲ್ಲಿ ಚರ್ಚೆ ಮಾಡುತ್ತಾರೆ.

ಸ್ವಾಮಿಯವರ ಬರಹದಲ್ಲಿ ವಿಜ್ಞಾನ ಮತ್ತು ಸಾಹಿತ್ಯವನ್ನು ಮೇಳೈಸಿದ್ದು ಸಾಹಿತ್ಯದಲ್ಲಿ ಚರಿತ್ರೆಯ ಪದರುಗಳಲ್ಲಿ ಸ್ವಾಮಿಯವರು ಸಸ್ಯಶಾಸ್ತ್ರದಲ್ಲಿ ಕಂಡು ಕೊಂಡವರು ಕನ್ನಡ ಓದುಗರಿಗೆ ಸಾಹಿತ್ಯ ರೂಪದಲ್ಲಿ ನೀಡಿರುವುದು ಮಹತ್ವಹಾಗಿದ್ದು ಈ ಅಧ್ಯಾಯವು ಅವರು ಕೃತಿಗಳಲ್ಲಿ ಇರುವ ವೈಜ್ಞಾನಿಕ ಅಂಶಗಳನ್ನು ಗುರ್ತಿಸುತ್ತದೆ. ಮತ್ತು ಸ್ವಾಮಿಯವರ ವಿಜ್ಞಾನ ಸಾಹಿತ್ಯವಾಗಿ ಮತ್ತು ಸಾಹಿತ್ಯವನ್ನು ವಿಜ್ಞಾನದ ವಿಷಯವಾಗಿ ಬರೆದಿರುವ ಅಂಶಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

**ಕೊನೆಟಿಪ್ಪಣಿಗಳು**

೧. ಹಸಿರುಹೊನ್ನು, ಪುಟ-೨೧೧.

೨. ಅದೇ, ಪುಟ-೩೬೫

೩. ಅದೇ, ಪುಟ-೩೬೬

೪. ಅದೇ, ಪುಟ-೩೬೬

೫. ಅದೇ, ಪುಟ-೩೬೭

೬. ಸಾಕ್ಷಾತ್ಕಾರದ ದಾರಿಯಲ್ಲಿ, ಪುಟ-೧೫

೭. ಅದೇ, ಪುಟ-೧೫

೮. ಅದೇ, ಪುಟ-೮೬

೯. ದೌರ್ಗಂಧಿಕಾಪಹರಣ, ಪುಟ-೩೨.

೧೦. ಅದೇ, ಪುಟ-೫೯.

೧೧. ಶಾಸನಗಳಲ್ಲಿ ಗಿಡಮರಗಳು, ಪುಟ-೩೭.

೧೨. ಬೃಹದಾದರಣಿಕ, ಪುಟ-೧೨.

೧೩. ಅದೇ, ಪುಟ-೧೧

೧೪. ಅದೇ, ಪುಟ-೭೩.

೧೬. ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ, ಪುಟ-೭೯.

೧೭. ಫಲಶ್ರುತಿ, ಪುಟ-೪೩.

## ಅಧ್ಯಾಯ ೭

# ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯಿಕ ಭಾಷೆಶೈಲಿ, ವಸ್ತು, ಸ್ವರೂಪ ಮತ್ತು ತಾತ್ವಿಕತೆ

ಡಾ. ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯವು ವಿಶಿಷ್ಟ ರೂಪದಿಂದ ಕೂಡಿದ್ದು, ಅವರ ಸಾಹಿತ್ಯದ ಎಲ್ಲಾ ಕೃತಿಗಳ ವಸ್ತು, ಸ್ವರೂಪ, ಭಾಷಾ ಶೈಲಿಯನ್ನು ಅವಲೋಕಿಸುವುದು ಮಹತ್ವದ್ದಾಗಿದೆ. ಸ್ವಾಮಿಯವರ ಕೃತಿಗಳನ್ನು ಡಾ. ಮುಳುಕುಂಟೆ ರಮೇಶ್ ಅವರು ತಮ್ಮ ಸಂಶೋಧನ ಪ್ರಬಂಧದಲ್ಲಿ ವಿಜ್ಞಾನಕೃತಿಗಳು ಮತ್ತು ಸ್ವ-ಅನುಭವ ಕಥಾನಗಳು ಆಧುನಿಕ ಕನ್ನಡ ವಿಂಗಡಿಸಿದ್ದು ಕಾಣಬಹುದು.

ಅಮೇರಿಕಾದಲ್ಲಿ ನಾನು ಕಾಲೇಜು ರಂಗ, ಕಾಲೇಜು ತರಂಗ, ಪ್ರಾಧ್ಯಾಪಕನ ಪೀಠದಲ್ಲಿ ಈ ಕೃತಿಗಳು ಸ್ಪಷ್ಟವಾಗಿ ಸಾಹಿತ್ಯಿಕ ರೂಪದಲ್ಲಿ ಮೂಡಿಬಂದಿದೆ. ಹಸಿರುಹೊನ್ನು, ದೌರ್ಗಂಧಿಕಾ ಸಹಣ, ಶಾಸನಗಳಲ್ಲಿ ಗಿಡಮರಗಳು, ಸಾಕ್ಷಾತ್ಕಾರದ ದಾರಿಯಲ್ಲಿ, ಬೃಹದಾರಣಿಕೆ, ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ, ಫಲಶೃತಿ, ಸಸ್ಯಪುರಾಣ, ಮುಂತಾದ ಕೃತಿಗಳಲ್ಲಿ ಸಸ್ಯಶಾಸ್ತ್ರ ಮೂಲದ್ರವ್ಯವಾಗಿದೆ. ಅವರ ಬರಹದ ಮೂಲ ಉದ್ದೇಶ ವಿಜ್ಞಾನವನ್ನು ವಿಜ್ಞಾನದ ವಸ್ತುವಿಗೆ ಸಾಹಿತ್ಯದ ಸ್ಪರ್ಶ ನೀಡಿ, ವಿಜ್ಞಾನವನ್ನು ಸರಳವಾದ ಭಾಷೆಯಲ್ಲಿ ಹಾಗೂ ಜನಸಾಮಾನ್ಯರಿಗೆ ಅರ್ಥವಾಗುವ ಮತ್ತು ಆಸಕ್ತಿ ಕೆರಳಿಸುವ ಸಾಹಿತ್ಯಿಕ ಭಾಷೆಯನ್ನು ಬಳಸಿದ್ದು ಕಾಣಬಹುದು. ವಿಜ್ಞಾನವನ್ನು ವಿಜ್ಞಾನದ ಭಾಷೆಯಲ್ಲಿ ಹೇಳದೆ ಅಂದರೆ Botonical language ಅನ್ನು ಸಾಹಿತ್ಯದ ಚೌಕಟ್ಟಿನಲ್ಲಿ ಒಳಪಡಿಸಿದ್ದು ಕಾಣಬಹುದು. ವಿಜ್ಞಾನದ ವಿಷಯಕ್ಕೆ ಸಾಹಿತ್ಯದ ಹೊದಿಕೆ ತೊಡಿಸಿದ್ದು ಕಾಣುತ್ತೇವೆ.

ಈ ಅಂಶಗಳನ್ನು ಅವರ ಲೇಖನಗಳಾದ ಕದಂಬ, ಲಿಂಗ ಜಾತಿಯ ಪರಸ್ಪರ, ಪರಿಮಾಣ, ಪ್ರಣಯ ಪ್ರಸಂಗ, ಜೇಡಿನ ಚರಕ, ಹಸಿವಿನ ಬಳ್ಳಿ, ಮೀನಾಕ್ಷಿಯ ಸೌರಭ, ಹರಿಹರನ ರಗಳೆ, ಶಾಸ್ತ್ರೀ ಮತ್ತು ಸಾಂಸ್ಕೃತಿಕ ಟಿಪ್ಪಣಿ, ಆದಿ ಪಂಪನ ಕೃತಿಗಳಲ್ಲಿ ಮೋಹದ ಪ್ರಕಾರ, ಪಂಪನ ಕಾವ್ಯಗಳಲ್ಲಿ ಹೂ, ಗಿಡ, ಮರ, ಬಳ್ಳಿಗಳು, ಬಸವಣ್ಣನವರ ಸಸ್ಯ ಸಂಬಂಧ ಸೂಕ್ತಿಗಳು, ಸಸ್ಯಜೀವ, ಪ್ರಾಣಿಜೀವಿಗಳಂತಹ ಈ ಲೇಖನಗಳಲ್ಲಿ ಕಾಣುತ್ತೇವೆ. ಸಂಪೂರ್ಣವಾಗಿ ಸಾಹಿತ್ಯದ ನೆಲೆಯಲ್ಲಿ ಸಸ್ಯಗಳ ಪರಿಚಯ ನೀಡುವ ಲೇಖನಗಳು ಸಸ್ಯ ಸಾಹಿತ್ಯವೆಂದು ಹೇಳಬಹುದು. ಸಂಪೂರ್ಣವಾದ ಸಾಹಿತ್ಯದ ನೆಲೆಯಲ್ಲಿ ಡಾ. ಬಿ.ಜಿ.ಎಲ್. ಸ್ವಾಮಿಯವರು ಅಮೇರಿಕಾದಲ್ಲಿ ನಾನು, ಕಾಲೇಜು ರಂಗ, ಕಾಲೇಜು ತರಂಗ, ಪ್ರಾಧ್ಯಾಪಕನ ಪೀಠದಲ್ಲಿ, ಪಂಚ ಕಲಶಗೋಪುರ, ಮೈಸೂರು ಡೈರಿ, ಕೃತಿಗಳನ್ನು ರಚಿಸಿದ್ದು, ಕಾದಂಬರಿ, ಲಘು ಹರಟೆ, ಹಾಸ್ಯ ಸಾಹಿತ್ಯದ ರೂಪಗಳನ್ನು ನೀಡಿದ್ದು, ಈ ಕೃತಿಯಲ್ಲಿ ಸರಳವಾದ ಭಾಷೆ, ಬಳಸಿದ್ದು ತಮ್ಮ ವೃತ್ತಿ ಅನುಭವದ ಘಟನೆಗಳನ್ನು ವಿವರಿಸುತ್ತಾ ನಿರೂಪಿಸಲಾಗಿ ಕೃತಿಯ ರಚನೆ ಕಾಣಬಹುದು.

ತಮಿಳು ತಲೆಗಳ ನಡುವೆ ಅನ್ಯಜ್ಞಾನ ಶಿಸ್ತಿನ ನೆಲೆಯಲ್ಲಿ ದ್ರಾವಿಡ ಭಾಷಿಕ, ಸಂಸ್ಕೃತ, ಐತಿಹಾಸಿಕ ವಿಚಾರಗಳನ್ನು ಹಾಸ್ಯ ರೂಪದಲ್ಲಿ ಬರೆದಿರುತ್ತಾರೆ. ತಮ್ಮ ಅನುಭವಗಳು ತಾವು ಕಂಡುಕೊಂಡ ಸಾಹಿತ್ಯಿಕ ಸಾಂಸ್ಕೃತಿಕ ಸಂಶೋಧನ ಜ್ಞಾನಗಳನ್ನು ಬಳಸಿದ್ದು ಕಾಣುತ್ತದೆ. ನಟರಾಜ ಚಿದಂಬರ ಕೃತಿಯು ಕೂಡ ಈ ನೆಲೆಯಲ್ಲಿ ಧಾರ್ಮಿಕ ಐತಿಹಾಸಿಕ ವಿಷಯಗಳ ಸಂಶೋಧನ ಕೃತಿಯಾಗಿ ಮೂಡಿಬಂದಿದೆ.

ಅವರ ಒಟ್ಟು ಕೃತಿಗಳ ಸಾಹಿತ್ಯಿಕ ಭಾಷೆ, ವಸ್ತು, ಶೈಲಿಯು ವಿಶಿಷ್ಟತೆಯಿಂದ ಕೂಡಿದ್ದು ಅವರು ತಮ್ಮ ಸಂಕೀರ್ಣ ಕೃತಿಗಳಲ್ಲಿ ಮತ್ತು ಸಾಹಿತ್ಯಿಕ ಕೃತಿಗಳಲ್ಲಿ ಬಳಸಿದ ಸಾಹಿತ್ಯಿಕ ಭಾಷೆಯನ್ನು ಅಧ್ಯಯನಕ್ಕೆ ತೊಡಗಿಸುವುದು ಮಹತ್ವದ್ದಾಗಿದ್ದು, ಅವರ ಪ್ರತಿಯೊಂದು ಕೃತಿಯ ವಿಷಯ ವಸ್ತುವನ್ನು ಹಾಗೂ ಅವರ ಬರವಣಿಗೆ ಶೈಲಿಯನ್ನು ಕೃತಿಗಳ ಸ್ವರೂಪವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಬಿ.ಜಿ.ಎಲ್. ಸ್ವಾಮಿಯವರ ಕೃತಿಗಳು ವಸ್ತುವನ್ನು ಕನ್ನಡ ಸಾಹಿತ್ಯ ಮತ್ತು ವಿಭಿನ್ನ ಜ್ಞಾನ ಸಾಹಿತ್ಯವಾಗಿ ವಿಭಾಗಿಸಿದರೆ ತಪ್ಪಾಗಲಿಕ್ಕಿಲ್ಲ. ವಿಜ್ಞಾನ ಅದರಲ್ಲೂ ಸಸ್ಯ ವಿಜ್ಞಾನ ಪ್ರಾಧಾನ್ಯ ಪಡೆಯಬಹುದಾದರೂ ಶಾಸನ, ಜಾನಪದ, ಚಾರಿತ್ರಿಕ, ಭೌಗೋಳಿಕ ಇತ್ಯಾದಿ

ಇನ್ನೂ ಅನೇಕ ಜ್ಞಾನ ಸಾಹಿತ್ಯವನ್ನು ಒಳಗೊಳ್ಳುತ್ತದೆ. ಇಲ್ಲಿ ಜ್ಞಾನವೆಂಬುದು ಶಾಸ್ತ್ರವಾಗಬೇಕಾದರೂ ಅದು ಸಾಹಿತ್ಯವಾಗಿ ವಸ್ತುರೂಪ ಪಡೆದಿರುವುದೇ ಬಿ.ಜಿ.ಎಲ್. ರವರ ವಿಶೇಷ ಸ್ಪಷ್ಟವಾದ ವರ್ಗೀಕರಣ ಕಾಣಬರುವಲ್ಲಿಯೂ ಯಾವ ಕೃತಿಯನ್ನು ಯಾವ ವಿಭಾಗದಲ್ಲಿ ಚರ್ಚಿಸಬಹುದು ಎನ್ನುವಷ್ಟು ಸಂಕೀರ್ಣವಾಗಿದೆ ವಸ್ತು. ಪ್ರತಿ ಕೃತಿಯೂ ೪ ಅಥವಾ ೮ ಜ್ಞಾನಶಿಸ್ತುಗಳನ್ನು ಏಕಕಾಲದಲ್ಲಿ ಮಂಡಿಸುತ್ತದೆ. ಹಾಗಾಗಿ ವಸ್ತುವಿನ ಚರ್ಚೆಯೂ ಅಷ್ಟೇ ಗಹನವಾಗಿ ಸಾಕಷ್ಟು ವರ್ಗೀಕರಣ ಹಂತಗಳಲ್ಲಿ ಸಾಗುತ್ತದೆ.

**ಭಾಷಾ ಶೈಲಿ:**

ಬಿ.ಜಿ.ಎಲ್. ಸ್ವಾಮಿಯವರ ವಿಜ್ಞಾನ ಕೃತಿಗಳಲ್ಲಿ ಭಾಷಾ ಶೈಲಿಯೂ ಸರಳವಾದ ಹಾಸ್ಯದಿಂದ ಕೂಡಿದ್ದು, ಪ್ರತಿಯೊಂದು ಕೃತಿಯು ವಿಶಿಷ್ಟವಾದ ಶೈಲಿಯಿಂದ ಕೂಡಿದೆ. ಲಲಿತ ಪ್ರಬಂಧಗಳ ರೂಪದಲ್ಲಿ ಕಥೆಗಳ ರೂಪದಲ್ಲಿ, ಕೃತಿಯಲ್ಲಿ ತಾವೇ ನಿರೂಪಕರಾಗಿ ಮಾತನಾಡುತ್ತಾ ಸಾಗುತ್ತಾರೆ. ಸ್ವಾಮಿಯವರು ತಮ್ಮ ಶೈಲಿಯ ಬಗ್ಗೆ ಬಾನುಲಿ ಸಂದರ್ಶನದಲ್ಲಿ ಅವರೇ ಹೇಳುವ ಮಾತುಗಳಿಂದ ಅವರ ಭಾಷೆ ಶೈಲಿಯನ್ನು ಗುರುತಿಸಬಹುದು.

"ವಿಜ್ಞಾನವನ ವಿಜ್ಞಾನವಾಗಿಯೇ ಬರೆದ ರೀತಿಯಲ್ಲಿ ಜನ ಎಷ್ಟು ಓದುತ್ತಾರೆಯೇ ಅಂತ ಒಂದು ಸಂದೇಹ ಬಂತು. ಆದ್ದರಿಂದ ಹಾಸ್ಯರವಷ್ಟೂ ಒಂದು ಮಾಧ್ಯಮವನ್ನಾಗಿ ಉಪಯೋಗಿಸಿಕೊಂಡರೆ, ಅದನ್ನು ಓದುವ ಭರದಲ್ಲಿ ವಿಜ್ಞಾನ ವಿಷಯಗಳು ಅವರ ಮನಸ್ಸು ಹೊಕ್ಕಿತು ಅಂದರೆ ಧನ್ಯತೆಗೆ ಅನುಕೂಲವಾಗುತ್ತೆ ಅಂದುಕೊಂಡೆನು"[೧] ಎಂದು ಡಾ. ಸ್ವಾಮಿಯವರು ಹೇಳುವಂತೆ ಅವರ ಬಹುಪಾಲು ಕೃತಿಗಳು ಸರಳವಾದ ತಿಳಿಯಾದ ಹಾಸ್ಯದಿಂದ ಕೂಡಿವೆ. ಅವರು ವರದಿ ರೂಪದಲ್ಲಿ ಶೈಲಿಯ ಬಗ್ಗೆ ಇದೇ ಸಂದರ್ಶನದಲ್ಲಿ ಮುಂದುವರೆದು ಹೀಗೆ ಹೇಳುತ್ತಾರೆ.

"ಇದರಲ್ಲಿ ಒಂದು ಅಂಶ ಇದೆ. ಒಂದು reporting ಶೈಲಿ ಒಂದಿದೆ. ವಿಜ್ಞಾನಕ್ಕೆ ಬೇಕಾದ್ದು reporting ಶೈಲಿ. ಆದ್ರೆ Popular Science ಅಂತ ಅನ್ನೋವಾಗ ಅದನ್ನು ಜನಪ್ರಿಯವಾಗಿ ಮಾಡೋದಕ್ಕೆ ಆ reporting ಶೈಲಿ ಅಷ್ಟು ಅನುಕೂಲವಾಗೋದಿಲ್ಲಾಂತ ನಿನ್ನ ಭಾವನೆ. Popular Scienceಗೆ ಒಂದು ವಿಧದ ಶೈಲಿ ಒಂದು jorgon ಬೇಕೆ ಬೇಕೂಂತ ನನ್ನ ಇಷ್ಟವಿದೆ. ಶೈಲಿಯ ಒಳಗೆ, ಹೇಳೂ ರೀತಿಯಲ್ಲಿ ವ್ಯತ್ಯಾಸಗಳಿವೆ.

ಜನಪ್ರಿಯ ವಿಜ್ಞಾನ ಬರೆಯುವಾಗ ವಿಜ್ಞಾನದ ಶೈಲಿಯಾದ reporting ಶೈಲಿ ಬಳಸುವುದರಿಂದ ಸಾಮಾನ್ಯ ಜನರಿಗೆ ಅರ್ಥವಾಗುವುದಿಲ್ಲ ಮತ್ತು ಆಸಕ್ತಿಯೂ ಮೂಡುವುದಿಲ್ಲ. ಜನಪ್ರಿಯ ವಿಜ್ಞಾನ ಬರೆಯುವಾಗ ಅದು ಆಸಕ್ತಿ ಮೂಡಿಸುವಂತೆ ಇರಬೇಕಾಗುತ್ತದೆ."[೨] ಅದರಿಂದ ಸ್ವಾಮಿಯವರ ಕೃತಿಗಳು ಜನಸಾಮಾನ್ಯರಿಗೆ ಅರ್ಥವಾಗುವ ತಿಳಿ ಹಾಸ್ಯ ಶೈಲಿಯಲಿ ಇರುವುದು ಕಾಣಬಹುದು.

ಹಸಿರು ಹೊನ್ನು ಕೃತಿಯ ಭಾಷಾಶೈಲಿಯು ಸರಳವಾದ ಭಾಷೆಯಲ್ಲಿ ಮೂಡಿಬಂದಿದೆ. ತಮಿಳುನಾಡಿನಲ್ಲಿ ತಮ್ಮ ವೃತ್ತಿ ಬದುಕಿನಲ್ಲಿ ತಮ್ಮ ವಿದ್ಯಾರ್ಥಿಗಳೊಂದಿಗೆ ಹೋದ ಶೈಕ್ಷಣಿಕ ಪ್ರವಾಸದ ಅನುಭವ ಬಿಂಬಿಸುವ ಈ ಕೃತಿಯಲ್ಲಿ ಸ್ವಾಮಿಯವರು ತಮಿಳು ಮತ್ತು ಆಂಗ್ಲ ಭಾಷೆಯನ್ನು ಶಬ್ಧಗಳನ್ನು ದಿನನಿತ್ಯ ಜನ ಮಾತನಾಡುವ ರೀತಿಯಲ್ಲಿ ಬರೆದಿದ್ದು ಕಾಣಬಹುದು. ಹಸಿರು ಹೊನ್ನು ಕೃತಿಯ ಸಾಲುಗಳಲ್ಲಿ ಅದು ಕಾಣಬಹುದು.

"ನಿಮ್ಮ ಡಿಸ್ಟ್ರಿಕ್ಟ್ ಪಾರೆಸ್ಟ್ ಆಫೀಸರ್ ಎಂದೆ. ಅವನೊಬ್ಬ ಗಾರ್ದಿಭ" ಎಂದು ಸಂಸ್ಕೃತದಲ್ಲಿಯೇ ಹೇಳಿ 'ಅದು ವಿಷ ಅದನ್ನು ತಿಂದರೆ ಜನ ಸಾಯುತ್ತಾರೆ' ಎಂದರು. ಇದನ್ನು ಕೇಳಿಸಿಕೊಂಡು ಡಿಸ್ಟ್ರಿಕ್ಟ್ ಪಾರೆಸ್ಟ್ ಆಫೀಸರ್ ಅವನ ಕೆಳಗಿನ ದರ್ಜೆಯ ಅಧಿಕಾರಿಯಾದ ರೇಂಜರನು ದುರುದುರು ನೋಡಿ ನೀನೊಂದು ಹೇಳಿಮಾಡಿಸಿದ ಕತ್ತೆ."[೩]

ಡಿಸ್ಟ್ರಿಕ್ಟ್ ಫಾರೆಸ್ಟ್ ಆಫೀಸರು, ರೇಂಜರ್ ಎಂಬ ಆಂಗ್ಲ ಪದಗಳು ಬಳಕೆಯನ್ನು ಇಲ್ಲಿ ಬಳಸಿದ್ದು, ದಿನನಿತ್ಯ ಸಾಮಾನ್ಯವಾಗಿ ಮಾತನಾಡುವ ಶೈಲಿಯಲ್ಲಿ... ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ನಡೆದ ಘಟನೆ ಹೇಳುವ ರೂಪದಲ್ಲಿ ಸಾಮಾನ್ಯ ಭಾಷೆ ಬಳಸಿದ್ದು ಕಾಣಬಹುದು.

ಅಶೋಕ ಮರವನ್ನು ಕುರಿತು ಹೇಳುತ್ತಾ "ಸಾಲಿಟ್ಟಂತಿದ್ದ ನಾಲ್ಕು ಮರಗಳು ಆಕರ್ಷಿಸಿದವು. ಇಪ್ಪತ್ತು ಮೂವತ್ತಡಿ ಎತ್ತರ. ತುಂಬು ಎಲೆ, ತುಂಬು ಹೂ, ರೆಂಬೆ, ಕೊಂಬೆಗಳು ದಟ್ಟವಾಗಿ ಕೆಳಕ್ಕೆ ಜೋತಾಡುತ್ತಿವೆ. ಎಲೆಗಳೂ ತೂಗುತ್ತಿವೆ. ಒಂದೊಂದು ಎಲೆಗುತ್ತಿಗೂ ಒಂದೊಂದು ಹೂಗೊಂಚಲು. ಹೂವಿನ ಬಣ್ಣವೊ ಅಚ್ಚ ಕೆಂಪು, ದವಳವನ್ನೂ ನಾಚಿಸುವ ಕೆಂಪು"[೪] ಅಶೋಕ ಮರಗಳನ್ನು ವರ್ಣಿಸುತ್ತಾ ಬರೆದ ಈ ಸಾಲುಗಳು ಕಾವ್ಯಾತ್ಮಕವಾಗಿ ಕಾಣುತ್ತವೆ. ಇಂತಹ ಕಾವ್ಯಾತ್ಮಕ ವರ್ಣನೆಯನ್ನು ಕೃತಿಯ ಅಲಲ್ಲಿ ಕಾಣಬಹುದು. ಎಲೆಗಳು ತೂಗುತ್ತಿವೆ. ಹೂಗೊಂಚಲು ಎಂಬ ಸೊಗಸಾದ ಶಬ್ಧಗಳಿಂದ ಸೌಂದರ್ಯತ್ಮಕ ಶಬ್ಧಗಳಿಂದ ತಮ್ಮ ಹೇಳಿಕೆಗಳಿಗೆ ಅಲ್ಲಲ್ಲಿ ಮೆರಗು ತಂದಿರುತ್ತಾರೆ.

"ಸಸ್ಯಶಾಸ್ತ್ರದ ಪರಿಚಯ ಮಾಡುವಾಗ ವಿಜ್ಞಾನದ ಭಾಷೆಯನ್ನು ಬಳಸಿದ್ದು ಕಾಣುತ್ತದೆ. ಸಸ್ಯ ಪ್ರಪಂಚವನ್ನು ಎರಡು ಮುಖ್ಯ ಭಾಗಗಳಾಗಿ ವಿಂಗಡಿಸಬಹುದು. ನಾಳ ರಹಿತ, ನಾಳ ಸಹಿತ, ನಾಳ ಎಂದರೆ ಸಸ್ಯರಸವನ್ನು ಗಿಡಮರಗಳ ಬೇರಿನಿಂದ ಎಲೆ ತುದಿಯವರೆಗೂ ಕೊಂಡೊಯ್ಯುವುದಕ್ಕಾಗಿಯೇ ಏರ್ಪಟ್ಟಿರುವ ಕಣಸಮೂಹ ಎಂದರೆ ಅಂಗಾಂಶ (tissue) ಎಂದಿಟ್ಟು ಕೂಳ್ಳಿ ನಾಳ ಸಹಿತವಾಗಿ ಸಂಗಡದಲ್ಲಿ ಎರಡು ಒಳಪಂಗಡಗಳಿವೆ. ಬೀಜರಹಿತ, ಬೀಜಸಹಿತ, ಈ ಎರಡರಲ್ಲಿಯೂ ನಗ್ನಬೀಜ, ಆವೃತ ಬೀಜಗಳೆಂಬ ಗುಂಪುಗಳಿವೆ. ಮೊದಲನೆಯ ಗುಂಪಿನಲ್ಲಿ ಬೀಜಗಳು ನೇರವಾಗಿ ಕಣ್ಣಿಗೆ ಕಾಣುವಂತಿರುತ್ತವೆ. ಎರಡನೆಯದರಲ್ಲಿ ಅಂಡಕೋಶವೆಂಬ ಭರಣಿಯೊಳಗಡೆ ಅಂಟಿಕೊಂಡಿರುತ್ತವೆ. ನಗ್ನಬೀಜಗಳ ನಾಳಿಯ ಅಂಗಾಂಶದಲ್ಲಿರುವ ಕಣಗಳಿಗೆ ರಂಧ್ರಗಳಿಲ್ಲ. ಟ್ರೇಕ್ರಿಡ್ ಎನ್ನುತ್ತೇವೆ."[೫]

ಈ ಮೇಲಿನ ಗದ್ಯ ಸಾಲುಗಳು ಸಂಪೂರ್ಣವಾಗಿ ಸಸ್ಯಶಾಸ್ತ್ರದ ಭಾಷೆಯನ್ನು ಬಳಸಿದ್ದು ಕಾಣುತ್ತೇವೆ. ಇಲ್ಲಿ ನಾಳ ರಹಿತ, ನಾಳಸಹಿತ, ಕಣಸಮೂಹ, ಬೀಜರಹಿತ, ಬೀಜಸಹಿತ, ನಾಳೀಯ ಅಂಗಾಂಶ ಮುಂತಾದ ಸಸ್ಯಶಾಸ್ತ್ರೀಯ ಶಬ್ಧಗಳನ್ನು ಕನ್ನಡದಲ್ಲಿ ಸಾಮಾನ್ಯರಿಗೆ ಅರ್ಥವಾಗುವಂತೆ ಬಳಸಿದ್ದು ಅವರ ಬರವಣಿಗೆಯಲ್ಲಿ ವಿಜ್ಞಾನ ಪರಿಚಯದ ಸಾಹಿತ್ಯದ ಸರಳ ಭಾಷೆಯನ್ನು ಕಾಣುತ್ತೇವೆ.

ಸಾಕ್ಷಾತ್ಕಾರದ ಹಾದಿಯಲ್ಲಿ ಕೃತಿಯು ಹಸಿರು ಹೊನ್ನು ಕೃತಿಯಂತೆ ಸಸ್ಯಶಾಸ್ತ್ರದ ಪರಿಚಯ ಸಾಹಿತ್ಯ ಶೈಲಿಯಲ್ಲಿ ನೀಡಿರುವುದು ಕಾಣುತ್ತದೆ. ಅಡಕೆ, ಅಫೀಮಾ-ಗಾಂಜಾ, ತಂಬಾಕು, ಕಾಫಿ-ಟೀ, ಚಟವನ್ನು ಕುರಿತು ಎಂಬ ಶೀರ್ಷಿಕೆಗಳ ಅಡಿ ಕಥೆಯ ನಿರೂಪಣಾ ಶೈಲಿ, ಹಾಸ್ಯಮಯವಾಗಿ ಮತ್ತು ವಿವರಣಾತ್ಮಕವಾದ ಸಂಬಾಷಣಾ ರೂಪದಲ್ಲಿ ಬರೆದಿರುವುದು ಕಾಣುತ್ತೇವೆ.

"ಸಭಾಯಾ.... ಕುರ್ಯಾತ್ರಾಂಬೂಲ ಚರ್ತಣಂ ಎಂದು ತಾಂಬೂಲ ಮಂಜರಿಯಲ್ಲಿ ಉತ್ತವಾಗಿದೆ"[೬] ಎಂಬ ಸಂಸ್ಕೃತ ಶ್ಲೋಕಗಳ ಬಳಕೆಯಲ್ಲಿ ಅಲ್ಲಲ್ಲಿ ಕಾಣಬಹುದು. ವಚನಗಳು ಸಂದರ್ಭಕ್ಕೆ ಅನುಗುಣವಾಗಿ ಬಳಸಿದ್ದು ಕೂಡ ಕಾಣುತ್ತದೆ. ಪುರಾಣದ ಉಕ್ತಿಗಳು, ಸಸ್ಯಗಳ ಪರಿಚಯಕ್ಕೆ ಸಂಭಾಷಣೆಯ ರೂಪದ ಅರ್ಥಗಳನ್ನು ನೀಡುತ್ತಾರೆ.

ಶಾಸನಗಳಲ್ಲಿ ಗಿಡಮರಗಳು ಕೃತಿಗಳಯು ಇತಿಹಾಸದ ಕೃತಿಯ ರೂಪದಲ್ಲಿ ಪ್ರತಿಯೊಂದು ಸಸ್ಯಗಳು ಶಾಸನಗಳಲ್ಲಿ ಹೇಗೆ ಮೂಡಿಬಂದಿವೆ ಎಂಬುದನ್ನು ಸಂಶೋಧನ ಲೇಖನದ ರೂಪದಲ್ಲಿ ಬರೆದಿರುತ್ತಾರೆ.

"ಕೇವಲ ಒಂದು ನೂರು ವರ್ಷಗಳಲ್ಲಿ ಪ್ರಪಂಚದ ಬಹುಭಾಗವನ್ನು ಗೆದ್ದು ಜನರ ತನುಮನ ಧನಗಳನ್ನು ಕಸುಗೊಂಡು ಗಿಡ ಇದು."[೭] ಹೀಗೆ ವರ್ಣಾತ್ಮಕವಾದ ಭಾಷೆಯ ಶೈಲಿಯಲ್ಲಿ ಸಸ್ಯದ ಇತಿಹಾಸ ಅದರ ಮಹತ್ವವನ್ನು ತಿಳಿಸುತ್ತಾರೆ.

ಬೃಹದಾರಣಿಕೆ ಕೃತಿಯ ಭಾಷೆಯ ಶೈಲಿಯನ್ನು ಕಂಡುಕೊಳ್ಳುತ್ತಾ ಪ್ರತಿಯೊಂದು ಶೀರ್ಷಿಕೆಯಡಿ ಅವುಗಳ ಪರಿಚಯವು ಕಥೆಯ ಆರಂಭದ ಪರಿಚಯ ಮಾಡುವ ರೀತಿಯಲ್ಲಿ ಕಾಣುತ್ತೇವೆ. ಕಥೆಯ, ಕಾದಂಬರಿಯ ಪ್ರಾರಂಭದಲ್ಲಿ ಪರಿಸರದ ವರ್ಣನೆಗೆ ಹೇಗೆ ನಡೆಯುತ್ತದೋ ಹಾಗೆ ಸ್ವಾಮಿಯವರು ತಮ್ಮದೇ ಶೈಲಿಯಲ್ಲಿ ಶೀರ್ಷಿಕೆಗಳ ಪರಿಚಯ ಮಾಡುತ್ತಾರೆ.

"ಮಲೆವರಸೆ ಕಳಿಚ್ಚಿನ ನೋಟ ಅದ್ಭುತವಾದದ್ದು. ಕೆಲವು ಸಲ ವಿಸ್ತಾರವಾದ ಕಾಡು ದಗ ದಗ ಉರಿಯೇಳುತ್ತದೆ. ರಾತ್ರಿಯಲ್ಲಿ ಅನೇಕ ಮೈಲಿಗಳು ಬೆಳಗುತ್ತದೆ."[೮] ಕಾಳ್ಗಿಚ್ಚು ಕಾಡಿನಲ್ಲಿ ಹೀಗೆ ಇರುತ್ತದೆ ಎಂಬುದನ್ನು ಹೇಳುತ್ತಾ ಅದು ಕತ್ತಲೆಯಲ್ಲಿ ಬೆಳಗುತ್ತದೆ ಎಂದು ವರ್ಣಿಸುವ ರೀತಿ ಅನೇಕ ವರ್ಣನೆ ಭಾಷಾ ಶೈಲಿಗೆ ಉದಾಹರಣೆಗಳಾಗಿವೆ.

ದೌರ್ಗಂಧಿಕಾಪಹರಣ ಕೃತಿ ಸಸ್ಯಶಾಸ್ತ್ರದ ನೆಲೆ ಸಾಹಿತ್ಯಿಕ ಶೈಲಿಯಲ್ಲಿ ಬರೆದಿರುವ ಕೃತಿ ಸಂದರ್ಭಕ್ಕೆ ಅನುಗುಣವಾಗಿ ಸಂಸ್ಕೃತ ಶ್ಲೋಕವೇ ಬಳಕೆಯನ್ನು ಮತ್ತು ನಾಟಕೀಯ ರೂಪದ ಸಂಭಾಷಣೆಯ ಇಡೀ ಕೃತಿಯಲ್ಲಿ ಕಾಣಬಹುದು. ಹಾಸ್ಯಮಯವಾಗಿ ಮಹಾಭಾರತದ ಪಾತ್ರಗಳು ತಮಗೆ ತಮ್ಮ ಸ್ನೇಹಿತರಿಗೆ ಇಟ್ಟು ಹಾಸ್ಯಮಯವಾಗಿ ಈ ಕೃತಿ ರಚನೆ ಮಾಡಿದ್ದು ಕಾಣುತ್ತೇವೆ.

ಫಲಶ್ರುತಿಯು ವಿಜ್ಞಾನದ ಭಾಷೆಗೆ ಸಾಹಿತ್ಯದ ಸ್ಪರ್ಶ ನೀಡುವ ರೀತಿಯಲ್ಲಿ ಪರದಾರಿಗಳ ಪರಿಚಯ ಮತ್ತು ಅನನ್ಯ ಹಿನ್ನೆಲೆಯನ್ನು ತಿಳಿಸುತ್ತಾ ವಿಜ್ಞಾನದ ಭಾಷಾ ಶೈಲಿಗೆ ಸಾಹಿತ್ಯದ ನೆಲೆ ಒದಗಿಸಿರುವರು.

ನಮ್ಮ ಹೊಟ್ಟೆಯಲ್ಲಿ ದಟ್ಟ ಅಮೇರಿಕಾ ಕೃತಿಯ ಭಾಷಾ ಶೈಲಿಯು ಕೂಡ ಕಥನ ರೂಪದ ನಿರೂಪಣೆಯಂತೆ ಕಂಡುಬರುತ್ತದೆ.

ಒಟ್ಟಾರೆ ಇವರ ವಿಜ್ಞಾನ ಕೃತಿಗಳ ಭಾಷಾಶೈಲಿಯು ಹಾಸ್ಯಭರಿತವಾದ ಮತ್ತು ಸಾಹಿತ್ಯಿಕ ತಳಹದಿಯಲ್ಲಿ ಸಂದರ್ಭಕ್ಕೆ ಅನುಗುಣವಾದ ಶ್ಲೋಕ, ವಚನಗಳ ಬಳಕೆಯು ಕೆಲವೊಮ್ಮೆ ಇವರ ಬರಹವನ್ನು ಕಾವ್ಯಾತ್ಮಕಗೊಳಿಸುತ್ತದೆ. ಕಥನ ರೂಪದ ನಿರೂಪಣೆ ಆಡುಭಾಷೆಯ ಬಳಕೆ ಇಂಗ್ಲೀಷ್, ತಮಿಳು, ಶಬ್ಧಗಳ ಸ್ವೀಕರಣವನ್ನು ಕಾಣಬಹುದು. ಸ್ವಾಮಿಯವರ ಕೃತಿಗಳಲ್ಲಿ ಮಾತೃಭಾಷೆ ಶೈಲಿಯನ್ನು ಕಂಡುಕೊಳ್ಳಲಾಗಿದೆ.

ಸಾಹಿತ್ಯಿಕ ನೆಲೆಯಲ್ಲಿ ರಚಿಸಿರುವ ಸ್ವಾಮಿಯವರ ಅನುಭವ ಕಥನಗಳು ಸಂಪೂರ್ಣ ಸಾಹಿತ್ಯಮಯವಾಗಿ ಗೋಚರಿಸುತ್ತವೆ. ಕಾಲೇಜು ರಂಗ, ಮತ್ತು ಕಾಲೇಜು ತರಂಗ, ಪ್ರಾಧ್ಯಾಪಕನ ಪೀಠದಲ್ಲಿ ಕೃತಿಗಳಲ್ಲಿ ಸ್ವಾಮಿಯವರು ತಮ್ಮ ವೃತ್ತಿ ಬದುಕಿನ ಅನುಭವಗಳನ್ನು ಹೇಳುತ್ತಾರೆ. ತಮಿಳುನಾಡಿನಲ್ಲಿ ತಮ್ಮ ವೃತ್ತಿಯ ಬದುಕು ಸಾಗಿಸಿದರಿಂದ ಅವರ ಈ ಕೃತಿಗಳಲ್ಲಿ ಕನ್ನಡ ಮಿಶ್ರಿತ ತಮಿಳು ಭಾಷೆಯ ಶಬ್ಧಗಳು ಹಾಸ್ಯವನ್ನು ಉಕ್ಕಿಸುತ್ತವೆ. ನೈಜ ಘಟನೆಗಳನ್ನು ಕಥಾನ ನಿರೂಪಣಾ ಶೈಲಿಯಲ್ಲಿ ಅವರು ಕಾದಂಬರಿ ರೂಪದ ಸಾಹಿತ್ಯಿಕ ಭಾಷೆಯ ಶೈಲಿಯನ್ನು ಬಳಸಿದ್ದು ಕಂಡುಬರುತ್ತದೆ.

ತಮಿಳುನಾಡು-ಕರ್ನಾಟಕ ಪರಿಸರದ ಭಾಷೆಯ ಅಂತರ್ ಕೊಡೊಕೊಳ್ಳುವಿಕೆಯು ಸ್ವಾಮಿಯವರ ಬರವಣಿಗೆಯಲ್ಲಿ ಕಾಣಬಹುದು. ಕಾಲೇಜು ರಂಗ, ಕಾಲೇಜು ತರಂಗ ಕೃತಿಗಳು ಕಥನ ರೂಪದಲ್ಲಿ ಪ್ರತಿ ತಲೆಬರಹದೊಂದಿಗೆ ಕಾದಂಬರಿ ರೂಪದಲ್ಲಿ ಸಾಗುತ್ತವೆ.

ಈ ಕೃತಿಗಳಲ್ಲಿ ಸರಳವಾದ ಭಾಷಾ ಶೈಲಿಯನ್ನು ಕಾಣುತ್ತೇವೆ. ಸಾಮಾನ್ಯವಾಗಿ ಪ್ರತಿದಿನ ಬಳಸುವ ಭಾಷೆಯಂತೆ ಕಂಡರೂ ಅದಕ್ಕೆ ಸಾಹಿತ್ಯದ ಸ್ಪರ್ಶ ನೀಡಿದ್ದಾರೆ. ಡಿಪಾರ್ಟ್‌ಮೆಂಟ್, ಕ್ಲಾಸ್, ಲೆಕ್ಚರರ್ ಮುಂತಾದ ಆಂಗ್ಲಶಬ್ಧಗಳ ಬಳಕೆಯು ಭಾರತೀಯ ಭಾಷೆಗಳಲ್ಲಿ ಹಾಸುವಕ್ಕಾಗಿದ್ದು ದಿನನಿತ್ಯ ಸಹಜವಾಗಿ ಮಾತನಾಡುವಾಗ ಆಂಗ್ಲ ಶಬ್ಧಗಳು ಪ್ರಧಾನ ಕಾಣುವಂತೆ ಸ್ವಾಮಿಯವರು ಈ ಶಬ್ಧಗಳ ಬಳಕೆಯಿಂದ ಕೃತಿಯಲ್ಲಿನ ಪಾತ್ರಗಳು ನಮ್ಮ ನಡುವೆ ನಡೆಯುತ್ತವೆ ಎಂಬಂತೆ ಭಾಸವಾಗುತ್ತದೆ. ಅವರ ಶೈಲಿಯು ಓದುಗನ ಸೆಳೆಯುವ ನೈಜ ತಂತ್ರವಾಗಿದೆ. ಕಾಲೇಜು ತರಂಗದ ಈ ಸಂವಾದದಲ್ಲಿ ಅವರ ಭಾಷಾ ಶೈಲಿಯನ್ನು ಕಾಣಬಹುದು.

"ಕರಟಕ ಓಡಿಹೋಗಿ ನನ್ನ ಕುರ್ಚಿಯ ಮೇಲೆ ಕುಳಿತು ದರ್ಪದಿಂದ 'ಪ್ಯೂನ್' ಎಂದು ಕೂಗಿದ. ದಮನಕ ಪ್ಯೂನಿನ ಪಾತ್ರವನ್ನು ಆಭಿನಯಿಸಿದ ಕರಟಕ ನನ್ನನ್ನು ಉದ್ದೇಶಿಸಿ What can't do for you sir? ಎಂದು ಲ್ಯಾಬೋಟರಿಯಲ್ಲಿ ನೋಡಿದೆ. ರೆಫ್ರೆಜರೇಟರ್ ಬಾಗಿಲು ತೆರಿದಿದೆ."[೯]

ಈ ಸಾಲುಗಳಲ್ಲಿ ನೈಜವಾಗಿ ಭಾರತೀಯ ಸಂಭಾಷಣೆಯಲ್ಲಿ ಆಂಗ್ಲ ಪದಗಳ ಬಳಕೆ ಇರುವುದರಿಂದ ಅವರು ಪ್ಯೂನ್, ಲ್ಯಾಬೋಟರಿ What can't do for you sir? ಎಂಬ ಪದಗಳು ಅವರ ನೈಜ ಶೈಲಿಯನ್ನು ತೋರಿಸುತ್ತದೆ.

ಕನಕದಾಸರ ಅಣಕು ಬದಲಾಯಿಸಿದ್ದು ಅವರು ಇದೇ ಕೃತಿಯಲ್ಲಿ ಹಾಸ್ಯ ಉಕ್ಕಿಸುತ್ತದೆ. "ನೀನು ಆಫೀಸ್‌ನೊಳಗೂ ಆಫೀಸನೊಳು ನೀನೂ, ಆಫೀಸ್‌ಉ ನೀನ್ನೋಳಗೊ? ಕರಟಕ ಕೈಲೋ?"[೧೦] ಎಂಬ ಅವರ ಹಾಸ್ಯಭರಿತವಾದ ಬಿಂಬಣೆ ಅವರ ಹಾಸ್ಯಶೈಲಿಗೆ ನೀಡಿದ ಕನ್ನಡಿಯಾಗಿದೆ.

ಪ್ರತಿಯೊಂದು ಸಂದರ್ಭದ ವಿಮರ್ಶೆಗೆ ಒಂದೊಂದು ತಲೆಬರೆವ ನೀಡುತ್ತಾ ಅದಕ್ಕೆ ಸೂಕ್ತವಾದ ಉಕ್ತಿಗಳ ನೀಡುವುದು ಕಾಣಬಹುದು. ಪರೀಕ್ಷಾ ನಿಯೋಗದ ಭೇಟಿ ಶೀರ್ಷಿಕೆಯಲ್ಲಿ ಈ ಪರಿಯ ಸೊಬಗವ ದೇವರು ಕಾಣೆ! 'ಎಷ್ಟೆಂದು ಬಣ್ಣಿಸಲಿ ನಿನ್ನ ಮಹಿಮೆಯನು? ಎಂದು ಡೈರಕ್ಟರ್ ಕುರಿತು ಅವರು ದಾಸ ಪದ ಬಳಸಿದ್ದು ಅವರ ಸೊಬಗಿನ ಬರವಣಿಗೆ ಶೈಲಿಯಾಗಿ ಕಾಣುತ್ತದೆ.

ಕಾಲೇಜು ತರಂಗ ಕೃತಿಯಲ್ಲಿ ಕೂಡ ಕಾದಂಬರಿ ರೂಪದ ನಿರೂಪಣೆ ಇರುತ್ತದೆಯಾದರೂ ಇಲ್ಲಿ ಕೂಡ ಪ್ರತಿಯೊಂದು ಸಂದರ್ಭಕ್ಕೆ ಅನುಗುಣವಾದ ತಲೆಬರಹದಲ್ಲಿ ಸಂದರ್ಭ ಪಾತ್ರಗಳು ವಿವರಿಸುತ್ತಾ ಸಾಗುತ್ತಾರೆ ಮತ್ತು ಹಾಸ್ಯದ ಧಾಟಿಯಲ್ಲಿ ಕೃತಿಯು ಸಾಗುತ್ತದೆ. ಹಾಸ್ಯರಸ ಇವರ ಈ ಕೃತಿಯಲ್ಲಿ ಅದ್ಭುತವಾಗಿ ಮೂಡಿದೆ.

"ದಮನಕ 'ನಮ್ಮ ವನಮಾಲೆಯ ಜೀಯರ್ ಸ್ವಾಮಿಗಳು ಇದ್ದಾರೆ'

ಡೈರಕ್ಟರ್: ಬೇರೆ ಇನ್ನೂ ಬಂದಿದ್ದಾರಂತಲಿ? ಅದೇನೋ ಅವರ ಹೆಸರು ಫಬ್‌ಭಕ್ ಅಸಾರಿ ಅಂತಲೋವನ್ನೋ.

ನಾನು: ಭಗವತ್ತಾದ ಆಚಾರ್ಯರು...?

ಹೌದ್ರಿ ಹೌದ್ರಿ ಅವರ ವಿಷಯ ಹೇಳಿ."[೧೧]

ಎಂಬ ಕಾಲೇಜು ತರಂಗದ ಪರಿಭಾಷೆಯು ಅವರ ಶೈಲಿಯ ಬರವಣಿಗೆಯನ್ನು ತೋರಿಸುತ್ತದೆ. ನಾಟಕದ ಪಾತ್ರಗಳ ರೂಪದ ಸಂಭಾಷಣೆಯನ್ನು ಕೊಡುತ್ತಾ ಆ ಬಗ್ಗೆ ಸಂದರ್ಭಗಳನ್ನು ನಿರೂಪಕರಾಗಿ ಕಥೆಯ ರೂಪದ ನಿರೂಪಣೆಯನ್ನು ನೀಡಿದ್ದು ಕಾಣಬಹುದು.

ಹಲವು ಆಂಗ್ಲ ಪದಗಳು ಪ್ರತಿದಿನ ಹೇಗೆ ಬಳಕೆಯಲ್ಲಿ ರೂಢಿಯಲ್ಲಿ ಇವೆಯೇ ಹಾಗೇ ಇವರು ತಮ್ಮ ಬರವಣಿಗೆಯಲ್ಲಿ ಅಳವಡಿಸಿರುವುದು ಕಾಣಬಹುದು. ಅವರ ಈ ಕೃತಿಯು ಆಂಗ್ಲ-ತಮಿಳು ಭಾಷೆಯು ಸಂಪೂರ್ಣ ಕನ್ನಡ ನೆಲೆಯಲ್ಲಿ ಹೇಗೆ ಉದ್ಗರವಾಗುತ್ತದೆ ಎಂಬುದು ತೋರಿಸಿರುವರು.

ಡಾ. ಬಿ.ಜಿ.ಎಲ್. ಸ್ವಾಮಿಯವರ ಅನುಭವ ಕಥನಗಳಲ್ಲಿ ಅವರ ಪ್ರವಾಸ ಕಥನವಾದ ಅಮೇರಿಕಾದಲ್ಲಿ ನಾನು ಹಾಗೂ ವ್ಯಕ್ತಿಚಿತ್ರದ ಮಾದರಿಯ ಪಂಚಕಲಶ ಗೋಪುರ, ಮತ್ತು ಅವರು ಮೈಸೂರುನಲ್ಲಿ ಕಳೆದ ತಮ್ಮ ಬದುಕಿನ ಅನುಭವಗಳ ದಾಖಲು ಇರುವ ಮೈಸೂರು ಡೈರಿ ಕೃತಿ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವಾದ ಸಾಹಿತ್ಯಿಕ ಶೈಲಿಯನ್ನು ಹೊಂದಿವೆ.

ಅಮೇರಿಕಾದಲ್ಲಿ ನಾನು ಪ್ರವಾಸ ಕಥನ (ಆಧುನಿಕ ಕನ್ನಡ ಗದ್ಯ ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ ಮಳುಕುಂಟೆ ರಮೇಶ್) ಹಾಸ್ಯಭರಿತ ಮತ್ತು ವ್ಯಂಗ್ಯಭರಿತವಾಗಿ ಅಮೇರಿಕಾದ ಜನರೊಂದಿಗೆ ಸ್ವಾಮಿಯವರು ಕಳೆದ ಕ್ಷಣಗಳು ಕಥನ ರೂಪದಲ್ಲಿ ದಾಖಲಾಗಿವೆ. ಹಾಸ್ಯರಸವೇ ಪ್ರಧಾನವಾದ ಈ ಕೃತಿಯು ವಿಶಿಷ್ಟವಾಗಿದೆ.

"ಹಡಗು ಹೊಕ್ಕ ಸ್ವಲ್ಪ ಹೊತ್ತಿನೊಳಗಾಗಿಯೇ ನಮಗೆ ಕಕ್ಕಸುಗಳ ದರ್ಶನವಾಯಿತು. ನಮ್ಮ ಮನಸ್ಸಿನಲ್ಲಿ ವಿಸ್ಮಯ ತೊಡಕುಗಳ ಅಂಕುರಿಸಿದವು. ಎದುರುಬದುರಾಗಿ ಕೂತು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಯಾವ ಬಗೆಯ ಮರ್ಯಾಯದೆ ಇಲ್ಲದೆ ಮಾನಮರ್ಯಾದೆಗಳನ್ನು ಬಿಟ್ಟು ಶೌಚಕ್ಕೆ ರೂಮಕೊಟ್ಟರು ತಾನೆ ಹೇಗೆ?"[೨]

ಅಮೇರಿಕಾ ಪ್ರಯಾಣದ ಸಂದರ್ಭದಲ್ಲಿ ಹಡಗಿನ ಒಳಗಿನ ಶೌಚಾಲಯದ ಸನ್ನಿವೇಶವನ್ನು ವಿವರಿಸುವ ಅವರ ಬರವಣಿಗೆಯೋ ಹಾಸ್ಯ ಉಕ್ಕಿಸುತ್ತದೆ. ನೈಜ ಘಟನೆಗಳು ಒಮ್ಮೊಮ್ಮೆ ಹೇಗೆ ಹಾಸ್ಯಕ್ಕೆ ಕಾರಣವಾಗುತ್ತದೆ ಎಂಬುದು ವಿವರಿಸಿದ್ದಾರೆ.

ಹೀಗೆ ಇಂತಹ ಅನೇಕ ಪ್ರಪಂಚಗಳಾದ ಸೀರೆಯ ಕತ್ತೆ, ನನ್ನ ಟೋಪಿ ಮುಂತಾದ ಉಪಶೀರ್ಷಿಕೆಯಲ್ಲಿ ಹಾಸ್ಯಭರಿತವಾದ ಬರವಣಿಗೆಯನ್ನು ಕಾಣಬಹುದು. ಪ್ರತಿಯೊಂದು ಪಾತ್ರಗಳ ಪರಿಚಯ ನಾಟಕೀಯ ರೂಪದ ಸಂಭಾಷಣೆ ನಾಟಕದ ಸುತ್ರಾ ಧಾನಿ ಹೇಳುವ ಕಥೆಯಂತೆ ಬರವಣಿಗೆಯನ್ನು ಕೃತಿಯುದ್ದಕ್ಕೂ ಮುಂದುವರೆಸುತ್ತಾರೆ.

ಪಂಚಕಲಶ ಗೋಪುರ ಕೃತಿ ಕರ್ನಾಟಕ ಸಂಘದ ಪರಿಚಯದೊಂದಿಗೆ ಐವರು ಸಾಹಿತಿಗಳ ವ್ಯಕ್ತಿ ಚಿತ್ರವನ್ನು ನೀಡುತ್ತದೆ. ಕರ್ನಾಟಕ ಕೃತಿಯು ಪ್ರಾರಂಭದಲ್ಲಿ ಪರಿಚಯಾತ್ಮಕವಾಗಿ ಸಾಗುತ್ತದೆ. ಹಾಗೂ ಐದು ಮಹನೀಯರ ವ್ಯಕ್ತಿ ಚಿತ್ರವನ್ನು ಬಿ.ಜಿ.ಎಲ್. ಸ್ವಾಮಿಯವರು ತಮ್ಮದೇ ಆದ ಹಾಸ್ಯಭರಿತ ಹಾಗೂ ಗೌರವಪೂರ್ವಕವಾದ ಭಾಷಾ ಶೈಲಿಯನ್ನು ಇಲ್ಲಿ ಬಳಸಿದ್ದು ಕಾಣಬಹುದು.

ಕರ್ನಾಟಕ ಸಂಘದ ಅಂಗ ರಚನೆಯನ್ನು ಹೇಳುವ ಅವರ ಶೈಲಿ ಹೀಗಿದೆ. "ನಡುಗೋಡೆಯ ಬಾಗಿಲಿನ ಮೂಲ ಪೂರ್ವ ದಿಕ್ಕಿನ ರೂಮಿನೊಳಕ್ಕೆ ಪ್ರವೇಶ ಇನ್ನೊಂದು ಗುಹಾಲಯವೆಂದು ಹೇಳಬಹುದು. ಈ ರೂಮಿಗೆ ಪ್ರತ್ಯೇಕವಾಗಿ ಒಂದು ಬಾಗಿಲು, ಎರಡು ಕಿಟಕಿಗಳು ಇದ್ದವಾದರೂ ಅನ್ಯಗಳ ಮೂಲಕ ಗಾಳಿ, ಬೆಳಕು ಒಳಹೊಕ್ಕಿದ್ದನ್ನು ನಾನು ಕಂಡಿಲ್ಲ."[೧೩]

ಹೀಗೆ ಕರ್ನಾಟಕ ಸಂಘದ ಅಂಗ ರಚನೆಯನ್ನು ವ್ಯಂಗ್ಯವಾದ ಶೈಲಿಯಲ್ಲಿ ನೈಜತೆಯನ್ನು ತೋರಿಸುವಾಗೆ ಬರೆಯುತ್ತಾರೆ. ಓದುಗನ ಮನಸ್ಸಿನಲ್ಲಿ ಕಲ್ಪನೆಯನ್ನು ಮೂಡುವ ರೀತಿಯಲ್ಲಿ ಸರಳಭಾಷೆಯನ್ನು ಬಳಸಿದ್ದು ಕಾಣಬಹುದು.

ವ್ಯಕ್ತಿಚಿತ್ರಗಳ ಪರಿಚಯ ಮಾಡುವ ಅವರ ಭಾಷಾಶೈಲಿಯು ಸಂಭಾಷಣೆಯ ರೂಪದಲ್ಲಿ ಬರೆಯುವುದರೊಂದಿಗೆ ಸಂದರ್ಭಕ್ಕೆ ತಕ್ಕಂತೆ ವಿಷಯ ನಿರೂಪಣೆಮಾಡುತ್ತಾರೆ. ಸಾಹಿತ್ಯಿಕ ವಾದ, ಕಾವ್ಯಾತ್ಮಕ ಸಾಲುಗಳು ಕಾಣಬಹುದು.

"ಅವಳ ಲಂಗವನಿಗಿಟ್ಟು
ಇವನ ಚಡ್ಡಿ ಅವಳಿಗಿಟ್ಟು
ಹಾಡ ಬಯಸದೆ."[೧೪]

ಎಂಬ... ಸಂಭಾಷಣೆಯನ್ನು ಹಾಸ್ಯಮಯವಾಗಿ ಇಲ್ಲಿಇ ಚಿತ್ರಿಸಿರುವ ಸ್ವಾಮಿಯವರ ಹಾಸ್ಯ ಶೈಲಿಯು ಎದ್ದುಕಾಣುತ್ತದೆ.

"ಶ್ರೀಕಂಠ ಗಿರಿಕಂಠ ಕನ್ನಡದ ಹಿರಿಭಂಟ
ಕನ್ನಡ ನಾಡು ನುಡಿಗಳ ಗಂಟಶಿರದಲಿ
ತಳೆದ ಸಿರಿಗಂಡ – ಸರ್ವಜ್ಞ"[೧೫]

ಎಂದು ತಿ.ನಂ.ಶ್ರೀ. ಕುರಿತು ಅವರನ್ನು ಸರ್ವಜ್ಞನ ವೇಷಧಾರಿ ಹೇಳು ಮಾತು. 'ತಿ.ನಂ.ಶ್ರೀ. ಯವರ ಸಾಹಿತ್ಯಿಕ ವ್ಯಕ್ತಿತ್ವದ ರೂಪವನ್ನು ಸ್ವಾಮಿಯವರು ಮೂರು ಸಾಲುಗಳಲ್ಲಿ ವ್ಯಕ್ತಗೊಳಿಸಿದ್ದು ಅವರ ಶೈಲಿಗೆ ನಿದರ್ಶನವಾಗುತ್ತದೆ. ಪಂಚಕಲಶ ಗೋಪುರ ಕೃತಿಯು ಸರಳವಾದ ಭಾಷೆಯಲ್ಲಿ ಅಲ್ಲಲ್ಲಿ ಹಾಸ್ಯಭರಿತವಾಗಿ ಸ್ವಾಮಿಯವರ ಬರವಣಿಗೆಯಲ್ಲಿ ಮೂಡಿಬಂದಿದೆ.

ಸ್ವಾಮಿಯವರು ಮೈಸೂರು ಮಾನಸಗಂಗೋತ್ರಿಯ ಅನುಭವದ ಕಥನ ಮೈಸೂರು ಡೈರಿಯು ಆಸಕ್ತಿ ಹಾಸ್ಯ ಬರವಣಿಗೆಯ ಶೈಲಿಯಲ್ಲಿ ಕಥನ ರೂಪದಲ್ಲಿ ನಿರೂಪಣೆಯು

ಸಾಗುತ್ತದೆ. ಸರಳವಾದ ಆಡು ಭಾಷೆಯನ್ನು ಬಳಸಿದ್ದು ಇಲ್ಲಿ ಕಾಣಬಹುದು. ಸ್ವಾಮಿಯವರು ಎಲ್ಲ ಕೃತಿಗಳಂತೆ ಪ್ರತಿಯೊಂದು ಸಂದರ್ಭದ ಬಗ್ಗೆ ಒಂದೊಂದು ತಲೆಬರಹ ನೀಡುತ್ತಾ ಸಾಗುತ್ತಾರೆ. ಹಾಗೂ ಪಾತ್ರಗಳ ಪರಿಚಯ, ನಾಟಕ ರೂಪದ ಸಂಭಾಷಣೆ, ಕಥನರೂಪದ ನಿರೂಪಣಾ ಶೈಲಿಯನ್ನು ಇಲ್ಲಿಯೂ ಕಾಣಬಹುದು.

ಮಾನಸಗಂಗೋತ್ರಿಯ ಋತು ಪರ್ಯಾಯ ವರ್ಣಿಸುವ ಅವರ ಶೈಲಿಯು ಅವರ ವರ್ಣಾತ್ಮಕ ಭಾಷಾ ಪ್ರೌಢತೆಯನ್ನು ತೋರಿಸುತ್ತದೆ. "ಚೈತ್ರದಿಂದ ಶ್ರಾವಣ-ಭಾದ್ರಪದಗಳವರೆಗೂ ಮುಂಜಾನೆ ಐದೂವರೆ ಆರು ಗಂಟೆಗೆಲ್ಲ ಬೆಳಕೊಡೆಯುತ್ತದೆ. ನೇಸರಿಸಿ ಕದಿರು ನೆಲ ನೀರುಗಳ ಮೇಲೆಲ್ಲ ಚೆಲ್ಲಿ ನೆರಳು ಬೆಳಕು ನಡೆಯುತ್ತದೆ ಎಂದು ನೆರಳುಬೆಳಕಾಡುತ್ತಿದೆ"[೧೬] ಎಂಬ ಅಲಂಕಾರ ವರ್ಣನೆಯು ಅವರು ಪ್ರತಿ ಸನ್ನಿವೇಶದ ಚಿತ್ರಣ ನೀಡಿದ್ದು ಕಾವ್ಯ ಶೈಲಿಯನ್ನು ಸ್ಪಷ್ಟಪಡಿಸುತ್ತದೆ.

ತಮಿಳು ತಲೆಗಳ ನಡುವೆ ಕೃತಿಯೂ ಸಂಶೋಧನ ಲೇಖನಗಳ ಸಂಗ್ರಹದಂತೆ ಹಾಸ್ಯಮಯವಾಗಿ ಸಂಭಾಷಣೆಯ ರೂಪದ ಬರವಣಿಗೆಯ ಶೈಲಿಯಿಂದ ಕೂಡಿದೆ. ಪ್ರತಿಯೊಂದು ವಿಷಯ ಹೇಳುವಾಗಲೂ ಅದಕ್ಕೆ ಒಂದು ತಲೆಬರಹ ನೀಡಿದ್ದು, ತಾರ್ಕಿಕವಾದ ಭಾಷೆಯನ್ನು ಬಳಸಿದ್ದು, ತರ್ಕಕ್ಕೆ ಸರಿಯಾದ ಅಡಿಟಿಪ್ಪಣಿಗಳನ್ನು ನೀಡುತ್ತಾ ವಿವರಣೆಯನ್ನು ಕೊಟ್ಟಿದ್ದು ಕಾಣಬಹುದು.

ಸ್ವಾಮಿಯವರ ಭಾಷಾಶೈಲಿಯು ಸೃಜನಾತ್ಮಕವಾಗಿದ್ದು ಅದು ಓದುಗನ ಮನ ಸೆಳೆಯುವ ಹಾಸ್ಯ, ವ್ಯಂಗ್ಯ, ವಿಡಂಬನೆ, ಕಾವ್ಯಾತ್ಮಕವಾಗಿ ಮೂಡಿಬಂದಿದೆ.

**ವಸ್ತು**

**ಸಾಹಿತ್ಯಿಕ ಕೃತಿಗಳು**

ಅಮೇರಿಕಾದಲ್ಲಿ ನಾನು ಕೃತಿಯು ಸ್ವಾಮಿಯವರ ಉನ್ನತ ವ್ಯಾಸಂಗದ ಪ್ರವಾಸದ ಅನುಭವ ಕಥಾನವಾಗಿದ್ದು, ಇದರಲ್ಲಿ ಸ್ವಾಮಿಯವರು ಭಾರತೀಯರ-ಅಮೇರಿಕನ್ನರ ಸಂಸ್ಕೃತಿ-ಉಡುಗೆ ತೊಡುಗೆ ಹಾಗೂ ಧಾರ್ಮಿಕ ವಿಚಾರಗಳನ್ನು ಕುರಿತು ಚರ್ಚಿಸುತ್ತಾರೆ.

ಅಮೇರಿಕಾದಲ್ಲಿ ತಮ್ಮಗೆ ಆದ ಅನುಭವ, ಮುಜುಗರ ಸಂಭವಿಸಿದ ಘಟನೆಗಳು, ಸ್ನೇಹಿತರ ಸತ್ಕಾರ, ಅಮೇರಿಕನ್ನರ ಜೀವನಕ್ರಮ, ಭಾರತೀಯರ ಮತ್ತು ಅಮೇರಿಕನ್ನರ ಮನೋಭಾವಗಳ ತೌಲನಿಕತೆಯನ್ನು ಒಳಗೊಂಡಿರುವ ವಿಷಯವಸ್ತು.

ಪಂಚಕಲಶ ಗೋಪುರ ಕೃತಿಯ ವಿಷಯ ವಸ್ತು ಕರ್ನಾಟಕ ಸಂಘ ಮತ್ತು ಅದರ ಅಧ್ಯಕ್ಷರು, ಉಪಾಧ್ಯಕ್ಷರ ಕುರಿತಾಗಿದ್ದು, ಕರ್ನಾಟಕ ಸಂಘದ ಸ್ವರೂಪ ಹಾಗೂ ಅದಕ್ಕೆ ಕಳಶಪ್ರಯಾದ ಬೆ.ವೆಂ.ಟಿ.ಎಸ್.ವಿ., ಬಿ.ಎಂ.ಶ್ರೀ., ಎ.ಆರ್.ಕೃ., ವಿ.ಸೀ.ಯವರ ವ್ಯಕ್ತಿಚಿತ್ರ ತನ್ನ ಗುರುಗಳೊಂದಿಗೆ ಒಡನಾಡಿದ ಮಧುರ ಕ್ಷಣಗಳು ಸ್ವಾಮಿ ಇಲ್ಲಿ ದಾಖಲಿಸಿರುವರು.

ಕಾಲೇಜುರಂಗ ಕೃತಿಯು ವಿಶೇಷವಾದ ತಲೆಬರಹಗಳಡಿ ಶೈಕ್ಷಣಿಕ ಆಡಳಿತ ಸ್ವಾಮಿಯವರ ವೃತ್ತಿ ಜೀವನದ ಅನುಭವಗಳು ಇಲ್ಲಿ ವಿಷಯ ವಸ್ತುವಾಗಿದೆ. 'ಕಾಲೇಜು ರಂಗ, ಇಂದಿನ ಶಿಕ್ಷಣದ ಪರಿಸ್ಥಿತಿಯನ್ನು ವಿಡಂಬಿಸುವ ಗ್ರಂಥಾ ಬ್ರಿಟಿಷ್ ಸಾಮ್ರಾಜ್ಯದ ಪ್ರಭಾವದ ಫಲವಾಗಿ ನಮಗೆ ದೂರದ ಶಿಕ್ಷಣ ಕ್ರಮವನ್ನು ನಾವು ದುಡಿಸಿಕೊಳ್ಳುವ ರೀತಿ, ಹೊಸದಾಗಿ ಪಡೆದುಕೊಂಡಿದ್ದ ಜೀವನ ಮೌಲ್ಯಗಳನ್ನು ಬೇಗ ಬೇಗ ಕಳೆದುಕೊಳ್ಳುವ ಸಂಗತಿ ಇವೆಲ್ಲ ನಮ್ಮ ಸಂಸ್ಕೃತಿಯ ಕುರುಹುಗಳು' ಎಂದು ಕೀರ್ತಿನಾಥ ಕುರ್ತುಕೋಟಿಯವರು ಕಾಲೇಜು ರಂಗ ಕೃತಿಯ ಮುನ್ನುಡಿಯಲ್ಲಿ ಹೇಳಿದ್ದು ಔಚಿತ್ಯಪೂರ್ಣವಾಗಿದೆ. ಸಂಪೂರ್ಣ ಕೃತಿಯು ಮಾರ್ಮಿಕವಾಗಿ ಶೈಕ್ಷಣಿಕ ದೋಷಣೆಗಳನ್ನು ಪ್ರತಿಬಿಂಬಿಸುತ್ತದೆ.

ಕಾಲೇಜು ತರಂಗ ಕೃತಿಯು ಒಬ್ಬ ಪ್ರಾಧ್ಯಾಪಕನ ಮತ್ತು ಪ್ರಿನ್ಸಿಪಾಲನ ಕಾಲೇಜು ಆಡಳಿತ, ಸೇವಾನುಭವದ ದಾಖಲೆಯಾಗಿದೆ. ಸ್ವಾಮಿಯವರು ಇಲ್ಲಿಯೂ ಕೂಡ ಶಿಕ್ಷಣದ ವ್ಯವಸ್ಥೆಯ ಅಂಕೊಡೊಂಕುಗಳನ್ನು ತೋರಿಸುವ ವಿಷಯ ವಸ್ತುವನ್ನು ಕೊಟ್ಟಿದ್ದು ಕಾಣುತ್ತದೆ.

ಮೈಸೂರು ಡೈರಿಯು ಸ್ವಾಮಿಯವರು ಮೈಸೂರಿನಲ್ಲಿ ಕಳೆದ ಅನುಭವಗಳ ದಾಖಲೆಯಾಗಿದೆ. ಮೈಸೂರು ಡೈರಿಯು ಸ್ವಾಮಿಯವರ ಮಾನಸಗಂಗೋತ್ರಿಯ ಅನುಭವವನ್ನು ಅಲ್ಲಿನ ಸಿಬ್ಬಂದಿ, ವಿದ್ಯಾರ್ಥಿ, ವ್ಯವಸ್ಥೆ ಪರಿಸರ ಇವುಗಳ ಈ ಕೃತಿಯ ವಿಷಯ ವಸ್ತುವಾಗಿದೆ.

**ಸಂಕೀರ್ಣ ಕೃತಿಗಳು:**

ಹಸಿರುಹೊನ್ನು ಮೂರು ಭಾಗಗಳಲ್ಲಿ ಕೂಡಿದ್ದು. ಇದು ಸಸ್ಯಶಾಸ್ತ್ರವೇ ಪ್ರಧಾನ ವಿಷಯ ವಸ್ತುವನ್ನು ಹೊಂದಿದೆ. ತಮ್ಮ ವಿದ್ಯಾರ್ಥಿಗಳೊಂದಿಗೆ ಸ್ವಾಮಿಯವರು ಕೈಗೊಂಡ ಸಸ್ಯಶಾಸ್ತ್ರದ ಅಧ್ಯಯನದ ಪ್ರವಾಸ ಕೃತಿಯಾಗಿದ್ದು, ಇದರಲ್ಲಿ ಸ್ವಾಮಿಯವರು ಹಲವು ಜಾತಿಯ ಮರಗಳ ಕುರಿತು ತಮ್ಮ ವಿದ್ಯಾರ್ಥಿಗಳಿಗೆ ವಿವರಣೆ ನೀಡುತ್ತಾರೆ. ಇಲ್ಲಿ ಸರ್ಪಗಂಧಿ ರವುಲ್ಫಿಯ ಸರ್ಪೇಂದ್ರನ ಎಂಬ ಗಿಡ ಬೆಳೆಯುತ್ತದೆ. ಇಪ್ಪತ್ತು ವರ್ಷಗಳ ಹಿಂದೆ ಭಾರತದ ಕಾಡುಗಳಲ್ಲಿ ಹೇರಳವಾಗಿದ್ದ ಈ ಗಿಡ ಬರುಬರುತ್ತಾ ಮಾನವನ ದುರಾಶೆಗೀಡಾಗಿ ಈಗ ಅಪರೂಪವಾಗಿದೆ.

ಸರ್ಪಗಂಧಿಯಂತ ಹಲವು ಸಸ್ಯಗಳ ವಿವರಣೆ ಹಾಗೂ ಅವುಗಳ ಮಹತ್ವ ಅವು ಮಾನವನೊಂದಿಗೆ ಹೊಂದಿದ್ದು ಅವಿನಾಭವ ಸಂಬಂಧ ಕುರಿತು ಬರೆದಿದ್ದು ಕಾಣಬಹುದು.

ದೌರ್ಗಂಧಿಕಾಪಹರಣ ಕೃತಿಯು ಸ್ವಾಮಿಯವರು ವಿದ್ಯಾರ್ಥಿ ದೆಸೆಯಲ್ಲಿ ತಮ್ಮ ಸ್ನೇಹಿತರೊಂದಿಗೆ ತಮ್ಮ ಗುರುಗಳ ಮಾರ್ಗದರ್ಶನದಲ್ಲಿ ಹೋದ ಶೈಕ್ಷಣಿಕ ಪ್ರವಾಸದ ಅನುಭವವನ್ನು ಮಹಾಭಾರತದ ಪಾತ್ರಗಳ ಹೋಲಿಕೆಯಿಂದ ವಿವರಿಸಿದ್ದು ಈ ಕೃತಿಯು ಸಸ್ಯಶಾಸ್ತ್ರದ ಪರಿಚಯದ ಪ್ರಧಾನ ವಿಷಯ ವಸ್ತುವನ್ನು ಒಳಗೊಂಡಿದೆ.

ಶಾಸನಗಳಲ್ಲಿ ಗಿಡಮರ ಕೃತಿಯಲ್ಲಿ ದಕ್ಷಿಣ ಭಾರತದ ಶಾಸನಗಳನ್ನು ಬಳಸಿಕೊಂಡಿದ್ದು, ಶಾಸನಗಳಲ್ಲಿ ಗಿಡಮರಗಳ ಉಲ್ಲೇಖ ಅವುಗಳ ಹಿನ್ನೆಲೆ ಹಾಗೂ ವಿವಿಧ ಭಾಷೆಯಲ್ಲಿ ಯಾವ ಹೆಸರಿನಿಂದ ಕರೆಯುತ್ತಾರೆ ಎಂಬುದನ್ನು ತೋರಿಸಿದ್ದು ಕಾಣಬಹುದು.

ಸ್ವಾಮಿಯವರೇ ಹೇಳುವಂತೆ ಸಸ್ಯ ಜಗತ್ತಿನೊಂದಿಗೆ ಮಾನವನ ನಂಟನ್ನು ಕುರಿತು ಮೇಲೆ ಕೇಳಿರುವ ಪ್ರಶ್ನೆಗಳಲ್ಲಿ ಶಾಸನಭ್ಯಾಸವೇನಾದರೂ ನಿರ್ದಿಷ್ಟವಾದ ಉತ್ತರಗಳನಿಯುತೆನೋ ಎಂಬುದನ್ನು ತಿಳಿಯುವ ಕುತೂಹಲ ಪ್ರಸ್ತುತ ಅವರ ಅಧ್ಯಯನ ಉದ್ದೇಶ.

ಸ್ವಾಮಿಯವರೇ ಹೇಳಿದಂತೆ ಇಲ್ಲಿ ಮಾನವನಿಗೂ ಸಸ್ಯಗಳಿಗೂ ಇರುವ ಸಂಬಂಧವನ್ನು ಶಾಸನಗಳ ಮೂಲವನ್ನು ಕಂಡುಕೊಳ್ಳುತ್ತಾರೆ. ಶಾಸನಗಳು ಮತ್ತು ಸಸ್ಯಗಳೇ ಇಲ್ಲಿನ ಪ್ರಧಾನ ವಸ್ತುವಾಗಿವೆ.

ಸಾಕ್ಷಾತ್ಕಾರದ ದಾರಿಯಲ್ಲಿ ಕೃತಿಯೂ ಎಲೆ, ಅಡಿಕೆ, ಅಫೀಮು, ಗಾಂಜಾ, ತಂಬಾಕು, ಕಾಫಿ–ಟೀ ಚಟವನ್ನು ಕುರಿತು ಬರೆಯುತ್ತಾರೆ. ಆರೋಗ್ಯಕ್ಕೆ ಸಸ್ಯಗಳು ಹೇಗೆ ಪೂರಕ ಮತ್ತು ಮಾರಕ ಎಂದು ಜ್ಞಾನ ಶಿಸ್ತುಗಳ ಈ ಕೃತಿಯ ವಿಷಯ ವಸ್ತುವಿಗೆ ಜೋಡಿಸಿದ್ದು ಕಾಣುತ್ತವೆ.

೧೧ನೇ ಶತಮಾನದಲ್ಲಿ ರಚಿತವಾದ ಶಿಲಪ್ಪದಿಕಾರಂ ಎಂಬ ತಮಿಳು ಕಾವ್ಯದಲ್ಲಿನ ನಾಯಕಿ ಕನ್ನಗಿಯು ತನ್ನ ಅಡಪ್ಪೆಯಿಂದ ಎಲೆ ಅಡಕೆಯನ್ನು ತೆಗೆದು ಗಂಡ ಕೋಮಲನಿಗೆ ಕೊಟ್ಟ ಸಂದರ್ಭ ಚಿತ್ರಿತವಾಗಿದೆ. ಸಸ್ಯ ಮತ್ತು ಇತಿಹಾಸ ಸಾಹಿತ್ಯವನ್ನು ಸಸ್ಯ ಪ್ರಧಾನವಾದ ವಸ್ತುವನ್ನಾಗಿಸಿ ಉಲ್ಲೇಖಿಸಲಾಗಿದೆ. ಕಾವ್ಯ, ಪುರಾಣ, ಜಾನಪದದ ವ್ಯಕ್ತಿಗಳು ಇದ್ದರೂ ಅದರಲ್ಲಿ ಮುಖ್ಯನಾಯಕ ಪಾತ್ರ ಸಸ್ಯಗಳದ್ದೇ. ತೋಟಗಾರಿಕೆ ಅಥವಾ ವಾಣಿಜ್ಯ ಬೆಳೆಗಳು ಹಾಗೂ ಮಾನವ, ನಡುವಿನ ಸಂಬಂಧದ ಇತಿಹಾಸ ಈ ಕೃತಿ ಒಳಗೊಂಡಿದೆ.

ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ ಕೃತಿಯು ವಿದೇಶದಿಂದ ಬಂದ ಕಾಯಿಪಲ್ಲೆಗಳು ಭಾರತದ ಅಡುಗೆ ಮನೆಗೆ ಹೊಕ್ಕು ಹೀಗೆ ನಮ್ಮ ಹೊಟ್ಟೆ ಸೇರಿಕೊಂಡು ಇಂದು ಬಿಡಿಸಲಾರದ ನಂಟು ಆಗಿವೆ ಎಂಬುದನ್ನು ಇತಿಹಾಸದ ಹಿನ್ನೆಲೆಯಲ್ಲಿ ವಿವರಿಸುತ್ತಾರೆ.

ಫಲಶ್ರುತಿ ಕೃತಿಯು ಫಲ ಮತ್ತು ಪುಷ್ಪಗಳು ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಹಣ್ಣು ಮತ್ತು ಹೂವುಗಳ ಮಹತ್ವ ಹಾಗೂ ಅದರ ಹಿನ್ನೆಲ್ಲೆಯನ್ನು ಸಾಹಿತ್ಯತ್ಮಕವಾಗಿ ಈ ವಿಜ್ಞಾನ ಕೃತಿಯಲ್ಲಿ ಸ್ವಾಮಿಯವರು ಬರೆದಿರುವರು.

ಬೃಹದಾರಣ್ಯಕ ಕೃತಿಯು ಸ್ವಾಮಿಯವರ ನಿಧನ ನಂತರ ಪ್ರಕಟವಾದ ಕೃತಿ. ಇದರಲ್ಲಿ ಸ್ವಾಮಿಯವರು ವನ್ಯಜೀವಿ ಮತ್ತು ವನ್ಯ ಸಸ್ಯಗಳ ಕುರಿತು ಸ್ವಾರಸ್ಯಕರವಾಗಿ ಬರೆದಿರುವರು.

ತಮಿಳು ತಲೆಗಳ ನಡುವೆ ಕೃತಿಯು ತಮಿಳು ಭಾಷೆ, ಚರಿತ್ರೆ, ಹಾಗೂ ದ್ರಾವಿಡ ಸಂಸ್ಕೃತಿಯ ಭಾಷಿಕ, ಸಾಹಿತ್ಯಿಕ, ಸಾಂಸ್ಕೃತಿಕವಾದ ಚರ್ಚೆಯನ್ನು ಆಧಾರ ಸಹಿತವಾಗಿ ಮಂಡಿಸಿದ್ದು ಕಾಣುತ್ತದೆ.

**ಸ್ವರೂಪ:**

ಅಮೇರಿಕಾದಲ್ಲಿ ನಾನು ಕೃತಿಯು ಸ್ವಾಮಿಯವರು ಪ್ರವಾಸ ಕಥನರೂಪದಲ್ಲಿವೆ. ಆದರೂ ಇದು ಕೇವಲ ಪ್ರವಾಸಿತಾಣಗಳ, ಅಥವಾ ಅಲ್ಲಿನ ಅನುಭವಗಳ ದಾಖಲೆಯಾಗಿರದೆ ಕಥಾನ ರೂಪದಲ್ಲಿ ಅನುಭವಗಳು, ಅಮೇರಿಕನ್ನರು, ಭಾರತೀಯರ ಸಂಸ್ಕೃತಿ ಹಾಗೂ ಅಲ್ಲಿನ ಜನರ ಔದಾರ್ಯವನ್ನು ನೆನೆಯುವ ಕೃತಿಯಾಗಿದೆ.

ಭಾರತದಿಂದ ಅಮೇರಿಕಾಕಕ್ಕೆ ಹಡಗಿನಲ್ಲಿ ಪ್ರಯಾಣಿಸಿದ್ದು ಪ್ರಾರಂಭಿಕವಾಗಿ ವಿವರಿಸುತ್ತಾರೆ. ಸಮುದ್ರದಾಚೆಯ ಕೆಲವು ದೇಶಗಳಿಗೆ ಹೋಗಿ ಹೆಚ್ಚಿನ ಶಿಕ್ಷಣ ಪಡೆದು ಬಾರೆಂದು ಭಾರತ ಸರ್ಕಾರ ನನಗೂ ಒಂದು ವೇತನ ಕೊಟ್ಟಿತು. ಹೆಚ್ಚಿನ ವಿದ್ಯಾಭ್ಯಾಸಕ್ಕೆ ತೆರಳಲು ಸರ್ಕಾರ ಅವಕಾಶಗಳ ಕೊಟ್ಟ ಬಗೆ ಸ್ವಾಮಿಯವರು ಇಲ್ಲಿ ವಿವರಿಸುತ್ತಾ ತಮ್ಮ ಪ್ರಯಾಣದ ಅನುಭವ ಹೇಳುತ್ತಾರೆ. ಹೀಗೆ ಪ್ರತಿಯೊಂದು ಸಂದರ್ಭಕ್ಕೆ 'ಹಡಗಿನಲ್ಲಿ', 'ನನ್ನ ಟೋಪಿ' ಮುಂತಾದ ಉಪಶೀರ್ಷಿಕೆಯಡಿ ಚರ್ಚಿಸುವುದು ಸಣ್ಣ ಸಣ್ಣ ಕಥೆಯ ರೂಪದಲ್ಲಿ ಕಾಣುತ್ತದೆ.

"ನೀವೇನ್ರಿ ಮಾಡುತ್ತೀರಿ?' ಎಂದರು.

'ಏನೂ ಇಲ್ಲ. ಸಾರ್'

'ಯಾಕ್ರಿ?"[೧೭]

ಎಂಬ ನಾಟಕ ರೂಪದಲ್ಲಿ ವ್ಯಕ್ತಿ–ವ್ಯಕ್ತಿಗಳ ನಡುವಿನ ಇಂತಹ ಸಂಭಾಷಣೆಯು ನಾಟಕ ರೂಪದಲ್ಲಿ ಕಾಣಬಹುದು.

ಕಾದಂಬರಿ ರೂಪದಲ್ಲಿ ಪಾತ್ರ, ಸನ್ನಿವೇಶ ಹಾಗೂ ವಸ್ತುವಿಗೆ ಜೀವ ನೀಡುತ್ತಾ ತಾವೇ ನಿರೂಪಕರಾಗಿ ಬರೆಯುತ್ತಾ ಸಾಗುವುದು ಕಂಡಾಗ ಕೃತಿ, ಇದು ಕಾದಂಬರಿ ರೂಪದಲ್ಲಿ ಕಾಣುತ್ತದೆ.

ಕಾಲೇಜು ತರಂಗ ಕೃತಿಯೂ ಕೂಡ ಸ್ವರೂಪದಲ್ಲಿ ಕಾದಂಬರಿ ಅಥವಾ ಒಂದು ನಾಟಕ ಎಂಬಂತೆ ಭಾಸವಾಗುತ್ತದೆ. ಕಥೆಯ ರೂಪದ ನಿರೂಪಣೆಯ ಇಲ್ಲಿ ಕಾಣುತ್ತಿವೆ. "ನಮ್ಮ ಊರಿನಿಂದ ಕಾಮನಪಟ್ಟಿಯನ್ನು ತಲುಪಬೇಕಾದರೆ ಎರಡು ರೈಲು ಬದಲಾಯಿಸಿ ಮೂರು ಬಸ್ಸು ಹಿಡಿದು"[೧೮] ಹೀಗೆ ಕಥೆಯನ್ನು ಹೇಳುವ ಶೈಲಿಯಲ್ಲಿ ಬರೆದಿರುವುದು. ಇದು ಕಥಾನ ಸ್ವರೂಪಕ್ಕೆ ಮಾದರಿಯಾಗಿ ಕಾಣುತ್ತಿವೆ.

ನಾಟಕ ರೂಪದ ಸಂಭಾಷಣೆಯು ಈ ಕೃತಿಯಲ್ಲಿ ಕಾಣಬಹುದು.

"ದಮನಕಃ "ಮನ್ನಿಸಬೇಕು"

ಡೈರೆಕ್ಟರ್: "ನಿಮ್ಮ ಗುರುಗಳನ್ನು ಹೇಳ್ರಿ!

ಕರಟಕ: ಅಂಡಪಿನ ಸ್ವಾಮಿಗಳು ಇಲ್ಲಿ ತಂಗಿದ್ದಾರೆ."[೧೯]

ಪಾತ್ರ ಪಾತ್ರಗಳ ನಡುವಿನ ಇಂತಹ ಸಂಭಾಷಣೆಗಳು ಕೃತಿಯನ್ನು ನಾಟಕ ರೂಪದ್ದು ಎಂಬ ರೀತಿ ಕಾಣಿಸುತ್ತವೆ.

ಪಂಚಕಲಶ ಗೋಪುರ ಕೃತಿಯು ಐದು ಮಹನೀಯರ ವ್ಯಕ್ತಿ ಚಿತ್ರಕಟ್ಟಿಕೊಡುತ್ತದೆ. ಈ ಕೃತಿಯು ಸ್ವರೂಪದಲ್ಲಿ ವ್ಯಕ್ತಿ ಚಿತ್ರರೂಪದಲ್ಲಿ ಮೂಡಿಬಂದಿದೆ.

ಮೈಸೂರು ಡೈರಿ ಕೃತಿಯು ಸ್ವಾಮಿಯವರು ಮೈಸೂರಿನಲ್ಲಿ ಕಳೆದ ದಿನಗಳ ಅನುಭವವಾಗಿದ್ದು ಡೈರಿಯ ರೂಪದಲ್ಲಿ ಬರೆಯದೆ ಅದನ್ನು ಕಥನ ರೂಪದಲ್ಲಿ ಬರೆದಿದ್ದು ಕಾಣುತ್ತೇವೆ. ಈ ಕೃತಿಯಲ್ಲಿ ನಾಟಕ ರೂಪದ ಸಂಭಾಷಣೆಗಳನ್ನು ಕಾಣಬಹುದು.

"ನಿಮ್ಮ ತಂದೆ ತಾಯಿಗಳೋ ಅಜ್ಜ–ಅಜ್ಜಿಯರೋ ಸ್ಥೂಲದೇವಿಗಳಾಗಿದ್ದರೆ?"[೨೦]

ನಮ್ಮ ಅಜ್ಜ ಸ್ಥೂಲ. ಅಜ್ಜಿ ಹಗುರ. ತಂದೆ ತೆಳು, ತಾಯಿ ದಪ್ಪ ಈ ರೀತಿ ನಾಟಕ ರೂಪದ ಸಂಭಾಷಣೆಗಳು ಅಲ್ಲಲ್ಲಿ ಕಾಣುತ್ತೇವೆ. ಈ ಕೃತಿ ನಾಟಕ ರೂಪದಲ್ಲಿ ಕಾಣುತ್ತಿದೆ.

ಹಸಿರುಹೊನ್ನು ಕೃತಿಯು ಪ್ರವಾಸ ಕಥನ ರೂಪದಲ್ಲಿದ್ದು. ಇದು ವಿದ್ಯಾರ್ಥಿಗಳೊಂದಿಗೆ ಸ್ವಾಮಿಯವರು ಶೈಕ್ಷಣಿಕ ಪ್ರವಾಸ ಕೈಗೊಂಡ ಸಂದರ್ಭದ ಸನ್ನಿವೇಶಗಳ ವಿವರಣೆಯೊಂದಿಗೆ ಸಸ್ಯವಿಜ್ಞಾನದ ಪರಿಚಯ ಮಾಡಿಕೊಡುವ ವಿಜ್ಞಾನ ಸಾಹಿತ್ಯ ಕೃತಿಯಾಗಿ ಕಂಡುಬರುತ್ತದೆ.

"ನಿಮ್ಮ ಸಾಮಾನುಗಳು ಎಲ್ಲಿ?

ನಮ್ಮ ಇಂದೆ ಬರುತ್ತಿವೆ. ಸಾರ್"[೨೧]

ಎಂಬ ಸಂಭಾಷಣೆಯು ಪ್ರವಾಸದಿ ಸಿದ್ಧತೆಯ ಬಗೆ ತಿಳಿಸುತ್ತದೆ. ವಿಜ್ಞಾನ ಸಾಹಿತ್ಯ ಕೃತಿಯಾಗಿ ಇದು ಈ ರೀತಿ ಕಾಣುತ್ತದೆ.

"ಹಸಿರು ಬಣ್ಣದ ಹೇರಳೆ ಗಾತ್ರದ ಚೆಂಡು ಕಾಯಿಗಳು"[೨೨] ಎಂದು ಕವಲು ಮರದ ಸಾಹಿತ್ಯಿಕವಾಗಿ ವರ್ಣಿಸಿದ್ದು ಇದು ವಿಜ್ಞಾನ ಸಾಹಿತ್ಯದ ಕೃತಿಯಾಗಿ ಕಾಣುತ್ತಿದೆ.

ಬೃಹದಾರಣ್ಯಕ ಕೃತಿ ವಿಜ್ಞಾನ ಸಾಹಿತ್ಯದ ಕೃತಿಯಾಗಿ ಕಾಣುತ್ತದೆ. ವಿಜ್ಞಾನದ ವಿಷಯವನ್ನು ವರ್ಣಾತ್ಮಕವಾಗಿ ವಿವರಿಸಿದವರು. "ಕಾಂಡದ ಸುತ್ತಳತೆಯ ಬೆಳವಣಿಗೆ ಇನ್ನೊಂದು ತೊಗಟೆಯಲ್ಲಿ ಚಿರಂಜೀವಿಯಾಗಿರುವ ಸೆಲ್ ಪದರಗಳು."[೨೩] ಹೀಗೆ ಸಸ್ಯವಿಜ್ಞಾನದ ವಿವರಣೆಯನ್ನು ಸಾಹಿತ್ಯವಾಗಿ ಬರೆದಿರುವುದರಿಂದ ಈ ಕೃತಿ ವಿಜ್ಞಾನ ಸಾಹಿತ್ಯವಾಗಿ ಕಾಣುತ್ತದೆ.

ಸಾಕ್ಷಾತ್ಕಾರದ ದಾರಿಯಲ್ಲಿ ಕೃತಿಯು ವಾಣಿಜ್ಯ ಬೆಳೆಗಳು ಮತ್ತು ಮಾನವನ ಚಟಗಳ ಕುರಿತು ಬರೆದಿರುವ ವಿಜ್ಞಾನ ಸಾಹಿತ್ಯವಾಗಿದೆ.

"ಷಣ್ಮುಖಂ ನಶ್ಯ! ಸರ್ವರೋಗ ಪರಿಹರಿಸಿ"

ನೆಗಡಿಯೆ? ಶಾಸ್ವಕೋಶದ ಭಾದೆ"[೨೪]

ಎಂಬ ಹವ್ಯಾಸದ ಕುರಿತು ಹಾಸ್ಯಾತ್ಮಕವಾಗಿ ಮೂಡಿಬಂದಿದೆ.

ಶಾಸನಗಳಲ್ಲಿ ಗಿಡಮರಗಳು ವಿಜ್ಞಾನ ಸಾಹಿತ್ಯದ ಕೃತಿಯಾಗಿದ್ದು ಕಂಡರೂ ಇತಿಹಾಸ ಸಾಹಿತ್ಯದ ಕೃತಿಯೊ ಕೂಡ ಆಗಿದೆ. ಇದರಲ್ಲಿ ಶಾಸನಗಳ, ಗಿಡಮರಗಳು, ಐತಿಹಾಸಿಕ ಸಾಮಾಜಿಕ ಹಿನ್ನೆಲೆ ಕುರಿತು ಚರ್ಚಿಸಿರುವ ಸಂಶೋಧನ ಲೇಖನವಾಗಿದೆ.

ದೌರ್ಗಂಧಿಕಪಹರಣ ಕೃತಿಯು ಪ್ರವಾಸ ಕಥನರೂಪದ ವಿಜ್ಞಾನ ಸಾಹಿತ್ಯದ ಕೃತಿಯಾಗಿದೆ. ನಾನು ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ನನ್ನೊಡನೆ ಅಭ್ಯಾಸ ಮಾಡಿದರು. ಮಾಡಿದರು. ಐದು ಮಂದಿ : ಧರ್ಮ, ಭೀಮ, ಅರ್ಜುನ, ನಕುಲ, ಏಕಲವ್ಯ ಎಂದಿದ್ದುಕೊಳ್ಳಿ ಎಂಬ

ವಾಕ್ಯಗಳು ಮಹಾಭಾರತದ ಪಾತ್ರಗಳನ್ನು ತಮಗೆ ಹೋಲಿಸಿಕೊಂಡು ಹೇಳಿದ್ದು ಇದೊಂದು ಸಾಹಿತ್ಯ ಒಳಗಿನ ವಿಜ್ಞಾನ ವಿಷಯ ಒಳಗೊಂಡ ಕೃತಿಯಾಗಿದೆ.

ಒಟ್ಟಿನಲ್ಲಿ ಸ್ವಾಮಿಯವರ ಸಾಹಿತ್ಯಿಕ ನೆಲೆಯಿಂದ ಚರ್ಚಿಸಿದ್ದ ಕೃತಿಗಳು ನಾಟಕ, ಕಾದಂಬರಿ, ರೂಪದಲ್ಲಿ ಕಾಲೇಜು ರಂಗ, ಕಾಲೇಜು ತರಂಗ ಮತ್ತು ಅಮೇರಿಕಾದಲ್ಲಿ ನಾನು ಪ್ರಾಧ್ಯಾಪಕನ ಪೀಠದಲ್ಲಿ ಕೃತಿಗಳು ಕಂಡುಬರುತ್ತವೆ.

ವಿಜ್ಞಾನ ವಿಷಯವನ್ನು ಸಾಹಿತ್ಯದ ರೂಪದಲ್ಲಿ ಹಸಿರುಹೊನ್ನು, ಸಾಕ್ಷತ್ಕಾರದ ದಾರಿಯಲ್ಲಿ ಬೃಹದಾರಣಿಕ, ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ, ಫಲಶ್ರುತಿಗಳಲ್ಲಿ ಕಾಣಬಹುದು.

ಪಂಚಕಲಶ ಗೋಪುರ ವ್ಯಕ್ತಿಚಿತ್ರವಾಗಿ ಮೂಡಿಬಂದರೆ ಶಾಸನಗಳಲ್ಲಿ ಗಿಡಮರಗಳು ಮತ್ತು ತಮಿಳು ತಲೆಗಳ ನಡುವೆ ಕೃತಿಗಳು ಅನ್ಯಜ್ಞಾನ ಶಿಸ್ತುನ್ನೊಳಗೊಂಡ ಸಂಶೋಧನ ಲೇಖನಗಳ ಸಂಗ್ರಹ ರೂಪದಲ್ಲಿವೆ.

**ತಾತ್ವಿಕತೆ:**

ಬಿ.ಜಿ.ಎಲ್. ಸ್ವಾಮಿಯವರ ಒಟ್ಟು ಸಾಹಿತ್ಯ ಸೃಜನೆಯ ಹಿನ್ನೆಲೆಯಲ್ಲಿ ಕೆಲವು ತಾತ್ವಿಕ ಅಂಶಗಳನ್ನು ಗುರುತಿಸಬಹುದಾಗಿದೆ.

* ಕ್ಲಿಷ್ಟವಾದ ವಿಭಿನ್ನ ಜ್ಞಾನಶಿಸ್ತುಗಳನ್ನು ಅನುಸಂಧಾನಗೊಳಿಸಿ ಸಾಹಿತ್ಯಿಕ ನೆಲೆಯಲ್ಲಿ ಪ್ರಸ್ತುತಪಡಿಸುವ ಬಗೆ. ಸಾಹಿತ್ಯಿಕ ಕೃತಿಗಳು ಸಾಮಾನ್ಯವಾಗಿ ಕಾಲ್ಪನಿಕ ಇಲ್ಲವೇ ಐತಿಹಾಸಿಕ ವಸ್ತು, ವಿಷಯಗಳನ್ನು ಒಳಗೊಂಡಿರುತ್ತವೆ. ಆದರೆ ವಿಜ್ಞಾನವನ್ನು ಸಾಹಿತ್ಯಿಕ ರೂಪದಲ್ಲಿ ಪ್ರಸ್ತುತಗೊಳಿಸುವ ಬಗೆಯಾಗಿ ಬಿ.ಜಿ.ಎಲ್. ಅವರ ಸೃಜನೆ ಗಮನಾರ್ಹವಾಗಿದೆ. ಕೇವಲ ವಿಜ್ಞಾನ ವಿಷಯದ ನಿರೂಪಣೆ ವರದಿ, ದ್ರಾವಿಡ, ಭೌಗೋಳಿಕ, ಮನಶಾಸ್ತ್ರೀಯ... ಇತ್ಯಾದಿ ಜ್ಞಾನ ಶಿಸ್ತುಗಳನ್ನು ಬಹುಶಿಸ್ತೀಯ ನೆಲೆಯಲ್ಲಿ ಚಿಂತನೆ ಮಾಡಿದ ಕ್ರಮವನ್ನು ಅಧ್ಯಯನ ಮಾಡಲಾಗಿದೆ.

* ದ್ರಾವಿಡ ಅಧ್ಯಯನದಂತಹ ಅಮೂರ್ತ ಸ್ವರೂಪದ ವಿಷಯವನ್ನು ಹಾಸ್ಯರೂಪದಲ್ಲಿ ಮೂರ್ತಿಭವಿಸಿದ ಬಗೆ. ಬಿ.ಜಿ.ಎಲ್. ಸ್ವಾಮಿಯವರ ತಮಿಳು ತಲೆಗಳ ನಡುವೆ ಕೃತಿಯನ್ನು ಗಮನಿಸಿದಾಗ ಈ ತತ್ವ ಅನಾವರಣಗೊಳ್ಳುತ್ತದೆ. academic ಚರ್ಚೆಯ ಘನವಸ್ತುವೊಂದನ್ನು ಜನಸಾಮಾನ್ಯರಿಗೂ ಅರ್ಥವಾಗಿರುವ ಬಗೆ ಇಲ್ಲಿ ಗಮನಾರ್ಹವೆನಿಸುತ್ತದೆ. ಇದು ತಮಿಳು–

ಕನ್ನಡ ಚರ್ಚೆಗೆ ಮಾತ್ರ ಸೀಮಿತವಾಗುತ್ತದೆ. ತಮಿಳು ಎಂದರೆ ದ್ರಾವಿಡ ಎಂಬ ವ್ಯಾಖ್ಯಾಯ ನೆಲೆಯಲ್ಲಿ ಈ ಚರ್ಚೆಯನ್ನು ದ್ರಾವಿಡ ಚರ್ಚೆಯಾಗಿಸಿದೆ.

* ತೌಲನಿಕ, ಭಾಷಾಂತರಗಳ ಮೂಲಕ ಭಾಷೆ, ಸಾಹಿತ್ಯಿಕ, ಸಾಂಸ್ಕೃತಿಕ ಚರ್ಚೆ ಬಿ.ಜಿ.ಎಲ್. ಸ್ವಾಮಿಯವರು ತಮಿಳು, ತೆಲುಗು, ಕನ್ನಡಗಳನ್ನು ಏಕಕಾಲಕ್ಕೆ ಅವಧಾನ ಮಾಡುತ್ತಲೆ ಅವುಗಳ ತೌಲನಿಕ ಮತ್ತು ಭಾಷಾಂತರಗಳ ಚರ್ಚೆ ಮಾಡುತ್ತಾರೆ. ಕಾವೇರಿಯ ಚರ್ಚೆಯ ಮೂಲಕ ಕನ್ನಡ–ತಮಿಳು ಪ್ರದೇಶ ಭೌಗೋಳಿಕ ವಿವರವನ್ನು ಏಕಕಾಲಕ್ಕೆ ಭಾಷಿಕ, ಸಾಹಿತ್ಯಿಕ, ಸಾಂಸ್ಕೃತಿಕ ಪರಿಸರದ ಚರ್ಚೆ ಅಧ್ಯಯನ ಯೋಗ್ಯ ಎನಿಸುತ್ತದೆ.

* ಅನ್ಯ ಜ್ಞಾನ ಶಿಸ್ತುಗಳನ್ನು ಏಕತ್ರಗೊಳಿಸುವ ಚಿಂತನಾಕ್ರಮ, ಸಸ್ಯವಿಜ್ಞಾನ, ಪ್ರಾಣಿವಿಜ್ಞಾನ, ಐತಿಹಾಸಿಕ... ಇತ್ಯಾದಿ ಜ್ಞಾನವನ್ನು ಬರಹಕ್ಕನುಗುಣವಾಗಿ ನಿರೂಪಿಸಿರುವ ಚಿಂತನೆಯನ್ನು ಗಮನಿಸಲಾಗಿದೆ. ಕದಂಬ ವೃಕ್ಷವೊಂದನ್ನು ಸಸ್ಯಶಾಸ್ತ್ರೀಯ, ಐತಿಹಾಸಿಕ ನೆಲೆಗಳಿಂದ ಪ್ರಸ್ತುತಗೊಳಿಸಿದ ಬಗೆ ಮೇಲಿನ ಅಂಶವನ್ನು ಸ್ಪಷ್ಟೀಕರಿಸುತ್ತದೆ.

* ಸಂಶೋಧನಾತ್ಮಕ ಪ್ರವೃತ್ತಿ / ವಿಮರ್ಶಾ ಪ್ರಜ್ಞೆ ಹಲವಾರು ಭಾಷೆ, ವಿಷಯಗಳನ್ನು ಪರಿಕರಗಳಾಗಿಸಿ ವೈಚಾರಿಕೆ ಜಾಗೃತಿ ಮೂಡಿಸುವ ಬರೆ ಹಾಗೂ ಪ್ರತಿಯೊಂದು ವಿಷಯಕ್ಕೂ ಕುತೂಹಲ ಪ್ರಜ್ಞೆಯಿಂದ ವಿಷಯದ ಊಹೆ ಮತ್ತು ಸಮರ್ಥ ಮಂಡನೆಯಿಂದ ಸಿದ್ಧಾಂತಿಕರಿಸುವ ಬಗೆ ಬರಹದ ಕ್ರಮದಲ್ಲೂ ನೇರ ವರದಿಯ, ಇಲ್ಲವೇ ಶುಷ್ಕ ಮಂಡನಾ ಕ್ರಮದೊಂದಿಗೆ ವಿವರಿಸದೆ ಸಾಹಿತ್ಯಿಕ ಪ್ರಕಾರಗಳನ್ನು, ಲಲಿತಪ್ರಬಂಧ, ಪ್ರವಾಸಕಥನ.... ಇತ್ಯಾದಿ ಕ್ರಮದಲ್ಲಿ ನಿರೂಪಿಸಿದ ಬಗೆ ಏಕಕಾಲಕ್ಕೆ ವಿಮರ್ಶಾಪ್ರಜ್ಞೆ ಸಂಶೋಧನ ಪ್ರವೃತ್ತಿಗಳೆರಡನ್ನೂ ಸ್ಪಷ್ಟೀಕರಿಸಿವೆ.

**ಕೊನೆಟಿಪ್ಪಣಿಗಳು**

೧. ಸ್ವಾಮಿಯಾನ ಪುಟ–೨೫

೨. ಅದೇ, ಪುಟ–೨೬

೩. ಹಸಿರುಹೊನ್ನು, ಪುಟ–೩೫

೪. ಅದೇ, ಪುಟ–೧೭೧

೫. ಅದೇ, ಪುಟ–೨೧೧

೬. ಸಾಕ್ಷಾತ್ಕಾರದ ದಾರಿಯಲ್ಲಿ, ಪುಟ–೯

೭. ಶಾಸನಗಳಲ್ಲಿ ಗಿಡಮರಗಳು, ಪುಟ–೨೮.

೮. ಬೃಹದಾರಾಣಿಕೆ, ಪುಟ–೧೫.

೯. ಕಾಲೇಜುರಂಗ, ಪುಟ–೩೪.

೧೦. ಅದೇ, ಪುಟ–೫೬.

೧೧. ಕಾಲೇಜು ರಂಗ, ಪುಟ–೭೬.

೧೨. ಅಮೇರಿಕಾದಲ್ಲಿ ನಾನು, ಪುಟ–೧೨

೧೩. ಪಂಚಕಳಶ ಗೋಪುರ, ಪುಟ–೫೪.

೧೪. ಅದೇ, ಪುಟ–೫೪.

೧೫. ಅದೇ, ಪುಟ–೭೮.

೧೬. ಮೈಸೂರು ಡೈರಿ, ಪುಟ–೦೧.

೧೭. ಕಾಲೇಜು ರಂಗ, ಪುಟ–೪೧.

೧೮. ಕಾಲೇಜು ತರಂಗ, ಪುಟ–೧೭.

೧೯. ಅದೇ, ಪುಟ–೭೬.

೨೦. ಅದೇ, ಪುಟ–೨೧.

೨೧. ಹಸಿರುಹೊನ್ನು, ಪುಟ–೦೯

೨೨, ಹಸಿರುಹೊನ್ನು, ಪುಟ–೨೯೩.

೨೩. ಬೃಹದಾರಾಣಿಕೆ, ಪುಟ–೧೧

೨೪. ಸಾಕ್ಷಾತ್ಕಾರದ ದಾರಿಯಲ್ಲಿ, ಪುಟ–೧೨೨.

೨೫. ದೌರ್ಗಂಧಿಕಾಪಹರಣ, ಪುಟ–೦೧.

# ಅಧ್ಯಾಯ ೮

## ಸಮಾರೋಪ

ಡಾ. ಬಿ.ಜಿ.ಎಲ್. ಸ್ವಾಮಿಯವರ ಕೃತಿಗಳ ಭಾಷಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕವಾದ ಒಳನೋಟ ಇದಾಗಿದ್ದು, ಸ್ವಾಮಿಯವರ ಸಾಹಿತ್ಯ ಭಿನ್ನ ನೆಲೆಗಳ ಹರವುಗಳನ್ನು ಕಟ್ಟಿಕೊಡುವ ಪ್ರಯತ್ನ ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ. ಅವರ ಕೃತಿಗಳ ಮೂಲಕ ಸಾಹಿತ್ಯದೊಂದಿಗೆ ವಿವಿಧ ಜ್ಞಾನ ಕ್ಷೇತ್ರಗಳನ್ನು ಹೀಗೆ ಮೇಳೈಸಿರುವುದು ಎಂಬುದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಡಾ. ಬಿ.ಜಿ.ಎಲ್. ಸ್ವಾಮಿಯವರ ಬರಹ ಹಾಗೂ ಅವರ ಬಗ್ಗೆ ವಿದ್ವತ್ ವಲಯದ ಮಹನೀಯರ ನೆನಪುಗಳ ಮೂಲಕ ಸ್ವಾಮಿಯವರ ಸ್ವಭಾವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಸ್ವಾಮಿಯವರ ವ್ಯಕ್ತಿಚಿತ್ರವನ್ನು ನೀಡುವ ಪ್ರಯತ್ನ ಮಾಡಲಾಗಿದ್ದು, ಅವರ ವ್ಯಕ್ತಿತ್ವದ ವಿವಿಧ ಆಯಾಮಗಳನ್ನು ಗುರುತಿಸಲಾಗಿದೆ.

ಸ್ವಾಮಿಯವರ ಬರಹದಲ್ಲಿನ ಸೃಜನಶೀಲತೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದ್ದು, ಸ್ವಾಮಿಯವರು ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಬರಹ ನೀಡಿದ್ದು, ಅವರ ಕೃತಿಗಳ ಮೂಲಕ ಅವರ ಬರಹದ ಸೃಜನಶೀಲತೆಯನ್ನು ಕಟ್ಟಿಕೊಡಲಾಗಿದೆ.

ಸ್ವಾಮಿಯವರು ತಮಿಳ ಸಾಹಿತ್ಯ ಬಲ್ಲವರಾಗಿದ್ದು, ತಮಿಳು ಭಾಷೆ ಮೇಲೆ ಅವರ ಪ್ರಭುತ್ವವು ಗಹನವಾಗಿತ್ತು. ಅವರ ಕನ್ನಡಕ್ಕೆ ತಮಿಳಿನಿಂದ ಭಾಷಾಂತರಿಸಿದ ಕೃತಿಗಳಲ್ಲಿನ ಸಾಹಿತ್ಯಿಕ 'ಸಂಸ್ಕೃತಿ', ಭಾಷಿಕ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಡಾ. ಬಿ.ಜಿ.ಎಲ್. ಸ್ವಾಮಿಯವರು ತಮಿಳು ಭಾಷಾ, ಸಂಸ್ಕೃತಿಯನ್ನು ಕೇಂದ್ರಿಕರಿಸಿ ನೀಡಿದ ದ್ರಾವಿಡ ಸಂಬಂಧ ಚಿಂತನೆಗಳ ವಿವರಣೆಯನ್ನು ಹಾಗೂ ಅವರು ನೀಡಿದ ವಾಗ್ವಾದಗಳು ಚರ್ಚೆಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ಸ್ವಾಮಿಯವರು ದ್ರಾವಿಡ ಚಿಂತನೆಗಳ ಆಧಾರ ಸಹಿತವಾದ ಚರ್ಚೆಯನ್ನು ಮಂಡಿಸಿದರು. ಅವರ ಅಭಿಪ್ರಾಯ ಬೇಧಗಳನ್ನು ಗುರುತಿಸಲಾಗಿದೆ.

ಸ್ವಾಮಿಯವರ ಕೃತಿಗಳಲ್ಲಿ ಸಸ್ಯವಿಜ್ಞಾನ ಮತ್ತು ಇತಿಹಾಸ, ಭೂಗೋಳ ಹಾಗೂ ವೈದ್ಯಕೀಯಶಾಸ್ತ್ರದ ... ಗಳನ್ನು ಕಂಡುಕೊಳ್ಳಲಾಗಿದೆ. ಅವರ ಕೃತಿಗಳಲ್ಲಿನ ವೈಜ್ಞಾನಿಕವಾದ ಅಂಶಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದ್ದು, ವಿಜ್ಞಾನ ಸಾಹಿತ್ಯದ ಏಕೀಭವನಗೊಳಿಸಿದ ಬಗೆಯನ್ನು ಕಂಡುಕೊಳ್ಳಲಾಗಿದೆ.

ಸ್ವಾಮಿಯವರ ಸಾಹಿತ್ಯದ ಭಾಷಾ ಶೈಲಿಯನ್ನು ಮತ್ತು ಸ್ವಾಮಿಯವರ ವಸ್ತು ಹಾಗೂ ಸಾಹಿತ್ಯದ ಸ್ವರೂಪಗಳನ್ನು ಅವರ ಕೃತಿಗಳನ್ನು ಆಧಾರಿಸಿ ಕಂಡುಕೊಳ್ಳಲಾಗಿದೆ. ಮತ್ತು ಅವರ ಸಾಹಿತ್ಯದ ತಾತ್ವಿಕ ಅಂಶಗಳನ್ನು ಗುರುತಿಸಲಾಗಿದೆ.

ಒಟ್ಟಿನಲ್ಲಿ ಸ್ವಾಮಿಯವರ ಸಾಹಿತ್ಯದ ಭಿನ್ನ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನವಾಗಿದ್ದು, ಡಾ. ಬಿ.ಜಿ.ಎಲ್. ಸ್ವಾಮಿಯವರ ಸೃಜನಾತ್ಮಕ ಬರಹದ ವಿವಿಧ ಆಯಾಮಗಳು ಮತ್ತು ಬರಹದ ಒಳನೋಟವನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಸ್ವಾಮಿಯವರ ಸಾಗರದಂತಹ ಬರಹದ ಸ್ವರೂಪದಲ್ಲಿ ಬೊಗಸೆಯಷ್ಟು ಈ ಅಧ್ಯಯನದಲ್ಲಿ ತೆಗೆದುಕೊಳ್ಳುವ ಪ್ರಯತ್ನಮಾಡಲಾಗಿದೆ.

ಬಿ.ಜಿ.ಎಲ್. ಸ್ವಾಮಿಯವರ ಕೃತಿಗಳಲ್ಲಿ ವ್ಯಕ್ತವಾಗಿರುವ ವಸ್ತು ವಿಷಯ ಅದನ್ನು ಯಾವ ನೆಲೆಯಿಂದ ಗ್ರಹಿಸಲಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಬಿ.ಜಿ.ಎಲ್. ಸ್ವಾಮಿಯವರ ವ್ಯಕ್ತಿತ್ವವನ್ನು ಅವರ ಬರಹದ ಮೂಲಕ ಗುರುತಿಸುವ ಪ್ರಯತ್ನವಾಗಿದೆ. ಮತ್ತು ಸ್ವಾಮಿಯವರ ಸಾಹಿತ್ಯದಲ್ಲಿನ ವೈವಿಧ್ಯತೆಯ ಆಯಾಮವನ್ನು ಹಾಗೂ ಭಾಷಾಂತರಕಾರರಾಗಿ ಬಿ.ಜಿ.ಎಲ್. ಸ್ವಾಮಿಯವರು ಕನ್ನಡ–ತಮಿಳು ಭಾಷಿಕ, ಸಾಂಸ್ಕೃತಿಕ, ಸಾಹಿತ್ಯಿಕ, ನೆಲೆಗಳು ಗುರುತಿಸುವ ವಿಷಯವನ್ನು ಹಾಗೂ ಅವರ ಸಾಹಿತ್ಯ ಕೃತಿಗಳನ್ನು ಭಾಷಾ, ಸಾಹಿತ್ಯಿಕ, ಸಾಂಸ್ಕೃತಿಕ ವಿಷಯಗಳ ಮೇಲೆ ಹಾಗೂ ಅವರ ಸಾಹಿತ್ಯದ ಮೂಲದ್ರವ್ಯ ಸಸ್ಯಶಾಸ್ತ್ರವನ್ನು ಸಾಹಿತ್ಯವಾಗಿ ಬರೆದ ಬಗೆಯನ್ನು ಕುರಿತು ವಿವರಣಾತ್ಮಕ ಮತ್ತು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲಾಗಿದೆ.

ಒಟ್ಟು ಚರ್ಚೆಯಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯದ ವಿಭಿನ್ನ ನೆಲೆಗಳನ್ನು ಕ್ರಮವಾಗಿ ವರ್ಗೀಕರಿಸಿ ವಿಜ್ಞಾನ ಮತ್ತು ಸಾಹಿತ್ಯಗಳೆಂಬ ಪ್ರಧಾನ ಪಾತಳಿಯಿಂದ ಅಧ್ಯಯನ ನಡೆಸಲಾಗಿದೆ. ಬಿ.ಜಿ.ಎಲ್. ಸ್ವಾಮಿಯವರ ಚರ್ಚೆ ಸಾಹಿತ್ಯ ಲೋಕದಲ್ಲಿ ವಿರಳವಾಗಿರುವ ಬಗೆಯನ್ನು ಪ್ರಸ್ತಾಪಿಸಿ ಅಧ್ಯಯನದ ಸಮಗ್ರತೆಗಾಗಿ ಅವರ ಒಟ್ಟು ಪ್ರಕಟಿತ ಲಭ್ಯ ಕನ್ನಡ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಹಾಗೆ ಪ್ರಾರಂಭದಲ್ಲಿ ಎತ್ತಿಕೊಂಡ ಚರ್ಚೆಗಳಿಗೆ ಉತ್ತರವಾಗಿ ದ್ರಾವಿಡ, ಭಾಷಾಂತರ, ವಿಜ್ಞಾನ, ಸಾಹಿತ್ಯ ಘಟಕಕ್ಕೆ ಮೂಲವಾಗಿ ಪರಿಹಾರ ಕಂಡುಕೊಳ್ಳಲಾಗಿದೆ. ಬಿ.ಜಿ.ಎಲ್. ಅವರ ಸಾಹಿತ್ಯ ಸೃಜನೆಯ ಒಟ್ಟು ನೋಟವನ್ನು ಒದಗಿಸುವ ಪ್ರಯತ್ನಮಾಡಲಾಗಿದೆ.

**ಪರಾಮರ್ಶನ ಗ್ರಂಥಗಳು**


೧. ಬಿ.ಜಿ.ಎಲ್. ಸ್ವಾಮಿ, ಶಾಸನಗಳಲ್ಲಿ ಗಿಡಮರಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.

೨. ಬಿ.ಜಿ.ಎಲ್. ಸ್ವಾಮಿ, ದೌರ್ಗಂಧಿಕಾಪಹರಣ, ಮನೋಹರ ಗ್ರಂಥಮಾಲೆ, ಧಾರವಾಡ, ೧೯೭೫.

೩. ಬಿ.ಜಿ.ಎಲ್. ಸ್ವಾಮಿ, ಕಾಲೇಜು ರಂಗ, ಕಾವ್ಯಾಲಯ, ಮೈಸೂರು, ೧೯೭೬.

೪. ಬಿ.ಜಿ.ಎಲ್. ಸ್ವಾಮಿ, ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕಾ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೮.

೫. ಬಿ.ಜಿ.ಎಲ್. ಸ್ವಾಮಿ, ಪ್ರಾಧ್ಯಾಪಕನ ಪೀಠದಲ್ಲಿ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೭೯.

೬. ಬಿ.ಜಿ.ಎಲ್. ಸ್ವಾಮಿ, ತಮಿಳು ತಲೆಗಳ ನಡುವೆ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೭೯.

೭. ಬಿ.ಜಿ.ಎಲ್. ಸ್ವಾಮಿ, ಸಾಕ್ಷಾತ್ಕಾರದ ದಾರಿಯಲ್ಲಿ, ಬಾಪ್ಕೋ ಪ್ರಕಾಶನ, ಬೆಂಗಳೂರು, ೧೯೮೦.

೮. ಬಿ.ಜಿ.ಎಲ್. ಸ್ವಾಮಿ, ಬೆಳದಿಂಗಳಲ್ಲಿ ಅರಳಿದ ಮೊಲ್ಲೆ, ಇತರ ಪ್ರಬಂಧಗಳು (ಅನುವಾದಿತ) ವಿಶ್ವ ಕನ್ನಡ ಸಮ್ಮೇಳನ, ಬೆಂಗಳೂರು, ೧೯೮೧.

೯. ಬಿ.ಜಿ.ಎಲ್. ಸ್ವಾಮಿ, ಹಸಿರುಹೊನ್ನು (೩ನೇ ಮುದ್ರಣ), ವಿಶ್ವ ಕನ್ನಡ ಸಮ್ಮೇಳನ, ಬೆಂಗಳೂರು, ೧೯೮೩.

೧೦. ಬಿ.ಜಿ.ಎಲ್. ಸ್ವಾಮಿ, ಫಲಶ್ರುತಿ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೪.

೧೧. ಬಿ.ಜಿ.ಎಲ್. ಸ್ವಾಮಿ, ಸಸ್ಯಜೀವಿ, ಪ್ರಾಣಿಜೀವಿ (ಬಿಡಿ ಬರಹಗಳ ಸಂಕಲನ) ಕನ್ನಡ ವಿಜ್ಞಾನ ಪರಿಷತ್ತು, ಬೆಂಗಳೂರು, ೧೯೮೩.

೧೨. ಬಿ.ಜಿ.ಎಲ್. ಸ್ವಾಮಿ, ಮೈಸೂರು ಡೈರಿ, ಕಾವ್ಯಾಲಯ, ಮೈಸೂರು, ೧೯೯೪.

೧೩. ಬಿ.ಜಿ.ಎಲ್. ಸ್ವಾಮಿ, ಸಸ್ಯಪುರಾಣ, ನವಕರ್ನಾಟಕ, ಪಬ್ಲಿಕೇಷನ್ಸ್, ಬೆಂಗಳೂರು, ೧೯೯೬.

೧೪. ಬಿ.ಜಿ.ಎಲ್. ಸ್ವಾಮಿ, (ಅನುವಾದ) ನಡೆದಿಯೇ ಬಾಳೌ ಕಾವೇರಿ, ಕಾವ್ಯಾಲಯ ಪ್ರಕಾಶಕರು, ೨೦೦೧.

೧೫. ಬಿ.ಜಿ.ಎಲ್. ಸ್ವಾಮಿ, (ಅನುವಾದ) ಜ್ಞಾನರಥ.

೧೬. ಮಲ್ಲೇಪುರಂ ಜಿ ವೆಂಕಟೇಶ (ಸಂಪಾದಕರು), ದ್ರಾವಿಡಶಾಸ್ತ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಡಾ. ಮಾಧವ ಪೆರಾಜೆ (ಅನುವಾದ), ತೌಲನಿಕ ದ್ರಾವಿಡ ವ್ಯಾಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೦೫

೧೮. ಡಾ. ರಮೇಶ್ ಮುಳುಕುಂಟೆ, ಬಿ.ಜಿ.ಎಲ್. ಸ್ವಾಮಿ, ನವಕರ್ನಾಟಕ ಪ್ರಕಾಶನ, ೨೦೦೫.

೧೯. ಡಾ. ರಮೇಶ ಕೆ., ಆಧುನಿಕ ಕನ್ನಡ ಗದ್ಯ ಮತ್ತು ಬಿ.ಜಿ.ಎಲ್. ಸ್ವಾಮಿಯವರ ಸಾಹಿತ್ಯ, (ಅಪ್ರಕಟಿತ) ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೯೯.

೨೦. ರಾಧಾಕೃಷ್ಣ ಬಿ.ಪಿ., ಬಿ.ಜಿ.ಎಲ್. ಸ್ವಾಮಿ, ಕನ್ನಡ ವಿಜ್ಞಾನ ಪರಿಷತ್ತು, ಬೆಂಗಳೂರು, ೧೯೯೫.

೨೧. ಶೇಷ್‌ಗಿರಿರಾವ್ ಎಸ್.ಎಲ್., ಸಾಹಿತ್ಯ ವಿಚಾರ ವಿಮರ್ಶೆ.

೨೨. ಡಾ. ಸುಬ್ಬಣ್ಣ ರೈ. ಎ., ದ್ರಾವಿಡ ಸಂಸ್ಕೃತಿ, ಸಿ.ವಿ.ಜಿ. ಪ್ರಕಾಶನ.೨೦೦೪

೨೩. ಡಾ. ಸುಚೇತಾ ನವರತ್ನ, ದ್ರಾವಿಡ ಅಧ್ಯಯನಕಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೧

೨೪. ಸೂ. ಸುಬ್ರಮಣ್ಯಂ (ಸಂಪಾದಕರು), ಸ್ವಾಮಿಯಾನ, ಕನ್ನಡ ವಿಜ್ಞಾನ ಪರಿಷತ್, ೧೯೮೨೫.



ಸ್ವಾಮಿ ದಂಪತಿಗಳು.

